# ಕೊಡಗು  ಸಂಗಾತಿ

ಅಕ್ಟೋಬರ್ 1 ರಿಂದ 15, 2000 ಪಾಕ್ಷಿಕ ಪತ್ರಿಕೆ (ನಿರ್ನಾಲ್ 15,ನಿರ್ನಾಲ್ 15-29 )

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

KA/SK/MYS-88 ಸಂಪುಟ : 4 ಸಂಚಿಕೆ : 19 ಪುಟಗಳು : 24 ಬೆಲೆ ರೂ. : 6-00



ಲೇಖನ : ಒಳಪುಟಗಳಲ್ಲಿ

**ಮಿಲ್ಲೆನಿಯಂ 2000ದ ಸಿಡ್ನಿ ಒಲಂಪಿಕ್ಸ್‌ನಲ್ಲಿ 69ಕೆ.ಜಿ. ಭಾರ ಎತ್ತಿ ಭಾರತ ಮಹಿಳಾ ಒಲಂಪಿಕ್ಸ್ ಇತಿಹಾಸದಲ್ಲೆ ಚೊಚ್ಚಲ ಪದಕ ಗಳಿಸಿ ಕೊಟ್ಟ ಭಾರತದ ಕರ್ನಾಂ ಮಲ್ಲೇಶ್ವರಿ**

**ನಾಡಿನ ಜನತೆಗೆ ದಸರಾ ಮತ್ತು ಕಾವೇರಿ ಸಂಕ್ರಮಣದ ಶುಭಾಶಯಗಳು.**

## ಪ್ರಪ್ರಥಮ ಬಾರಿಗೆ ಮೈಸೂರಿನಲ್ಲಿ ಕೊಡಗು ಗೌಡ ವಿದ್ಯಾರ್ಥಿ ನಿಲಯದಲ್ಲಿ ಕಾವೇರಿ ತೀರ್ಥ ಮತ್ತು ಪ್ರಸಾದ ವಿತರಣೆ ಕಾರ್ಯಕ್ರಮ

ದಿನಾಂಕ 18-10-2000 ದ ಬುಧವಾರ ದಿವಸ ಬೆಳಿಗ್ಗೆ 8 ಗಂಟೆಯಿಂದ ಸಂಜೆ 5ಗಂಟೆ ತನಕ ಶ್ರೀ ಕಾವೇರಿ ತೀರ್ಥ ಮತ್ತು ಪ್ರಸಾದವನ್ನು ಮೈಸೂರಿನ ಜಯಲಕ್ಷ್ಮಿಪುರದ ಕೊಡಗು ಗೌಡ ವಿದ್ಯಾರ್ಥಿ ನಿಲಯದಲ್ಲಿ ವಿತರಿಸಲಾಗುವುದು. ಜನಾಂಗದ ಸರ್ವ ಬಾಂಧವರು ಮತ್ತು ಸಾರ್ವಜನಿಕರು ಹೆಚ್ಚಿನ ಸಂಖ್ಯೆಯಲ್ಲಿ ಆಗಮಿಸಿ ದೈವ ಕೃಪೆಗೆ ಪಾತ್ರರಾಗಬೇಕಾಗಿ ಸವಿನಯ ವಿನಂತಿ. ಕಾವೇರಿ ಪೂಜೆ ಬೆಳಿಗ್ಗೆ 8 ಗಂಟೆಗೆ ಪ್ರಾರಂಭವಾಗುವುದು. ಇನ್ನು ಮುಂದಕ್ಕೆ ಪ್ರತಿವರ್ಷವೂ ನಡೆಸಲಾಗುವುದು.

**ಸರ್ವರಿಗೂ ಸುಸ್ವಾಗತ**

ಅಧ್ಯಕ್ಷರು ಮತ್ತು ಕಾರ್ಯಕಾರಿ ಮಂಡಳಿ

ಪ್ರಕಟಣೆ : ಕೊಡಗು ಸಂಗಾತಿ, ಮೈಸೂರು. ಕೊಡಗು ಗೌಡ ಮಾಜಿ ಸೈನಿಕರ ಕ್ಷೇಮಾಭಿವೃದ್ಧಿ ಸಂಘ, ಮೈಸೂರು.

## ಕೊಡಗಿನ ತಲಕಾವೇರಿಯಲ್ಲಿ ತೀರ್ಥೋದ್ಭವ

ಇದೇ ತಿಂಗಳ ಅಕ್ಟೋಬರ್ 17ರಂದು ಮಧ್ಯಾಹ್ನ 12-31ಕ್ಕೆ ತುಲಾ ಲಗ್ನದಲ್ಲಿ ಶ್ರೀ ಕಾವೇರಿ ತೀರ್ಥೋದ್ಭವ ಸಂಭವಿಸಲಿದೆ. ಹಗಲು ವೇಳೆಯಾದುದರಿಂದ ಈ ವರ್ಷ ಅಧಿಕ ಸಂಖ್ಯೆಯಲ್ಲಿ ಭಕ್ತಾದಿಗಳು ಪಾಲ್ಗೊಳ್ಳುವ ನಿರೀಕ್ಷೆ ಇದೆಯೆಂದು ತಿಳಿದುಬಂದಿದೆ.

***ವಿನಂತಿ :***

**ಸಂಗಾತಿಯ ಓದುಗರಿಗೂ ಚಂದದಾರರಿಗೂ ಕೊಡಗು ಸಂಗಾತಿಯ ವಂದನೆಗಳು.**

ಪ್ರತಿ ಸಲವೂ ವಿಳಾಸದಾರರ ವಿಳಾಸದ ಮೇಲ್ಗಡೆ ನವೀಕರಣ ದಿನಾಂಕವನ್ನು ಬರೆದಿದ್ದರು ಸಹ ಹಲವು ಚಂದದಾರರು ಈತನಕ ನವೀಕರಿಸಿರುವುದಿಲ್ಲ. 50% ಕ್ಕಿಂತ ಹೆಚ್ಚಿನ ಹಣವು ನವೀಕರಣಗೊಳ್ಳಲಿಕ್ಕಿದೆ. ಹಲವಾರು ರೀತಿಯಲ್ಲಿ ವಿನಂತಿಸಿದರೂ ಹೆಚ್ಚಿನ ಸ್ಪಂದವಾಗದೇ ಇರುವುದು ನಿಜಕ್ಕೂ ವಿಷಾದನೀಯ. ಪ್ರತಿಯೊಬ್ಬರ ಮನೆ ಮನೆಗೂ ಊರಿನ ಮೂಲೆ ಮೂಲೆಗೂ ಸಂಗಾತಿಗೆ ಹೋಗಲು ಅಸಾಧ್ಯವಾದ್ದರಿಂದ ಮಾನ್ಯ ಚಂದದಾರರು ಡಿ.ಡಿ./ಎಂ.ಓ.ಗಳ ಮೂಲಕ ದಯವಿಟ್ಟು ನವೀಕರಿಸಿ ಕೊಳ್ಳುವಂತೆ ಪ್ರಾರ್ಥನೆ. ಪೇಪರ್‌ಗಳ ಬೆಲೆ ಏರಿಕೆ, ಪೆಟ್ರೋಲ್‌ಗಳ ಬೆಲೆ ಏರಿಕೆಯಿಂದ ಹಲವಾರು ಹಾಗೂ ಸಮಸ್ಯೆಗಳಿಂದಲೂ ಕೊಡಗು ಸಂಗಾತಿಯನ್ನು ಪೋಷಿಸಿ ಬೆಳೆಸುವುದು ಸಂಗಾತಿಗೆ ಬಹು ತ್ರಾಸದಾಯಕವಾಗಿರುತ್ತದೆ. ಮಾನ್ಯ ಚಂದದಾರರು ಅಭಿಮಾನದಿಂದ ಸಹಕರಿಸಲು ಮರೆಯಬಾರದು. ಸನ್ಮಾನ್ಯ ಏಜೆಂಟರ್‌ಗಳು, ಹಿತೈಷಿಗಳು ಈ ನಿಟ್ಟಿನಲ್ಲಿ ಹೆಚ್ಚು ನಿಗಾ ವಹಿಸುವಂತೆ ಪ್ರಾರ್ಥನೆ. ಒಂದು ಜನಾಂಗದ ಏಳಿಗೆಯೇ, ಒಂದು ದೇಶದ ಪ್ರಗತಿ.

— ಸಂಪಾದಕಿ ಮತ್ತು ವ್ಯವಸ್ಥಾಪಕ ವರ್ಗ.

## ಮಡಿಕೇರಿ ಆಕಾಶವಾಣಿ ನಿಲಯದ ನಿರ್ದೇಶಕರಾಗಿ ಡಾ॥ ನಾಯಕ್ ಬಡ್ತಿ.



ಮಡಿಕೇರಿ ಆಕಾಶವಾಣಿ ಕೇಂದ್ರದ ಪ್ರಥಮ ನಿಲಯ ನಿರ್ದೇಶಕರಾಗಿ ಡಾ. ಚೇತನ್ ಕುಮಾರ್ ಎಸ್. ನಾಯಕ್ ಅವರು ಬಡ್ತಿ ಹೊಂದಿ ಅಧಿಕಾರ ಸ್ವೀಕರಿಸಿದ್ದಾರೆ. ಈ ಹಿಂದೆ ಇದೇ ಕೇಂದ್ರದಲ್ಲಿ ನಾಯಕ್ ಅವರು ಸಹಾಯಕ ನಿಲಯ ನಿರ್ದೇಶಕರಾಗಿ ಸೇವೆ ಸಲ್ಲಿಸುತ್ತಿದ್ದರು.

ಕನ್ನಡ-ಹಿಂದಿ ಮತ್ತು ಕೊಂಕಣಿ ಭಾಷಾ ನಾಣ್ಣುಡಿಗಳ ಕುರಿತ ಹೋಲಿಕೆ ಹಾಗೂ ಸಾಂಸ್ಕೃತಿಕ ಅಧ್ಯಯನ ದ ವಿಷಯಕ್ಕೆ ಸಂಬಂಧಿಸಿದಂತೆ ನಾಯಕ್ ಅವರು ಡಾಕ್ಟರೇಟ್ ಗೌರವ ಪಡೆದಿದ್ದಾರೆ. ದಕ್ಷಿಣ ಭಾರತದ ಹಿಂದಿ ಪ್ರಸಾರ ಸಭಾದ ಆಶ್ರಯದಲ್ಲಿ ಡಾ. ಸ್ನೇಹಲತಾ ಶರತ್ ಚಂದ್ರ ಅವರ ಮಾರ್ಗದರ್ಶನದಲ್ಲಿ ಈ ಸಾಧನೆ ಮಾಡಿದ್ದಾರೆ.



# 2000, ಸೆಪ್ಟಂಬರ್ 16 ರಿಂದ 31ರ ತನಕ

## ಒಳನೋಟ





| | | |
|---|---|---|
|  | ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ,** 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. ಫೋನ್ : **0821/516771** |
|  | ಮಡಿಕೇರಿಯಲ್ಲಿ ಸಂಗಾತಿ ಕಛೇರಿ | ಬೈತಡ್ಕ ಜಾನಕಿ ಬೆಳ್ಯಪ್ಪ,,ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, ಫೋನ್ : **08272/28047** |
|  | ಚಿಪ್ಪೆ, ಹಸೆಮಣೆ/ಶುಭಾಶಯ ಕಾರ್ಡ್ಸ್ ಕ್ಯಾಸೆಟ್/ಕೀ ಚೈನ್ ಲಭ್ಯ | ಚೆರಿಯಮನೆ ರಮೇಶ್, ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ, ಫೋನ್ : 08272/29620 |
|  | ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/73370 |
|  | ಬೆಂಗಳೂರು ಮಹಾನಗರ | ಅಮ್ಮಾಜೀರ ಪೊನ್ನಪ್ಪ, 20, 1ನೇ ಮೈನ್, 4ನೇ ಕ್ರಾಸ್, ಸಾಕಮ್ಮ ಗಾರ್ಡನ್, ಬಸವನಗುಡಿ, ಬೆಂಗಳೂರು - 04, ಫೋನ್ :080/6342822 |
|  | ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19,ಫೋನ್ : 080/6500946 |



ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **6** ರೂ., ಅರ್ಧ ವಾರ್ಷಿಕ -75 ರೂ., ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ವೃದ್ಧ ವೃದ್ಧೆಯರ ಸಂಗೋಪನ ವ್ಯವಸ್ಥೆ

ಭಾರತೀಯ ಸಂಸ್ಕೃತಿಯ ಪಿತೃ ದೇವೋಭವ, ಮಾತೃ ದೇವೋಭವ ಎಂಬುದಾಗಿ ತಿಳಿದು ತಂದೆ ತಾಯಿಗಳನ್ನು ದೇವರೆಂದು ತಿಳಿದು ಅವರು ವೃದ್ಧಾಪ್ಯವನ್ನು ಯಾವುದೇ ರೀತಿಯ ಕೊರತೆ ಇಲ್ಲದೆ ತಮ್ಮ ಅಂತ್ಯ ಕಾಲದವರೆಗೆ ಜೀವನವನ್ನು ಸಾಗಿಸುವ ಪರಿಸ್ಥಿತಿಇತ್ತು. ಹಾಗೂ ಸ್ವಲ್ಪಮಟ್ಟಿಗೆ ಈಗಲೂ ಇದೆ. ಆದರೆ ಈಗೀಗ ಈ ಪರಿಸ್ಥಿತಿ ಬದಲಾಗುತ್ತಿದೆ. ಮಗುವಿಗೆ ಈ ಅಭಿಪ್ರಾಯ ವನ್ನು ಚಿಕ್ಕಂದಿನಿಂದಲೇ ತಾಯಿಯಾಗಲೀ, ಶಾಲೆಯ ಉಪಾಧ್ಯಾಯ ರಾಗಲೀ ಅಥವಾ ಸಮಾಜವಾಗಲೀ ಮಾತೃ ದೇವೋಭವ, ಪಿತೃದೇವೋಭವ ಎಂಬ ಪದಗಳ ಅರ್ಥವನ್ನು ಹೇಳಿಕೊಡುವುದ ಲ್ಲದೆ ಆ ಶಬ್ದಗಳ ಅರ್ಥದ ರೀತಿಯಲ್ಲಿ ನಡೆದುಕೊಳ್ಳುವುದನ್ನು ಕಲಿಸುವುದಿಲ್ಲ. ಮಕ್ಕಳು ವಯಸ್ಸಿಗೆ ಬಂದಾಗ ಅವರಲ್ಲಿ ತಂದೆ ತಾಯಿಗಳ ಮೇಲಿನ ಪ್ರೀತಿಯೇ ಇಲ್ಲದಾಗಿ ಅವರದ್ದೇ ಪತ್ಯೇಕವಾದ ಪ್ರಪಂಚದ ಕಲ್ಪನೆಯನ್ನು ಸೃಷ್ಟಿಸಿ ಕೊಳ್ಳುತ್ತಾರೆ. ವಯಸ್ಸಾದ ತಂದೆ ತಾಯಿಗಳ ಯೋಗಕ್ಷೇಮವನ್ನೂ ನೋಡದೆ ವೃದ್ಧಾಪ್ಯದಲ್ಲಿ ವೃದ್ಧ ತಂದೆತಾಯಿಗಳು ಕಷ್ಟಪಡುವ ಪರಿಸ್ಥಿತಿ ಉಂಟಾಗಿದೆ. ಇದಕ್ಕೆ ಕಾರಣ ಪಾಶ್ಚಾತ್ಯ ವಿದ್ಯಾಭ್ಯಾಸವೇ ಕಾರಣವಾಗಿದೆ.

ಪಾಶ್ಚಾತ್ಯ ದೇಶಗಳಲ್ಲಂತೂ ಮಕ್ಕಳು ವಯಸ್ಸಿಗೆ ಬಂದ ನಂತರ ತಂದೆ ತಾಯಿಗಳನ್ನು ಬಿಟ್ಟು ತಮ್ಮದೇ ಆದ ಕುಟುಂಬ ದಲ್ಲಿರುತ್ತಾರೆ. ವೃದ್ಧ ತಂದೆತಾಯಿಗಳು ತಮ್ಮ ಮುಪ್ಪಿನ ಕಾಲದಲ್ಲಿ ವೃದ್ಧಾಪ್ಯವನ್ನು ಸೇರಿ ಅಲ್ಲಿಯ ಜನರ ಅಧೀನದಲ್ಲಿ ಪ್ರೀತಿ ವಾತ್ಸಲ್ಯವಿಲ್ಲದ ಬರಡು ಜೀವನವನ್ನು ನಡೆಸಿ ಕೊನೆಯ ಉಸಿರೆಳೆ ಯುವ ಕಾಲ ಬಂದಿದೆ. ಆದರೆ ಭಾರತೀಯ ಸಂಸ್ಕೃತಿ ಹಾಗಲ್ಲ ವೃದ್ಧ ತಂದೆತಾಯಿಗಳಿಗೆ ವಯಸ್ಸಾದ ಕಾಲದಲ್ಲಿ ತಮ್ಮ ತಮ್ಮ ಮಕ್ಕಳ ಮೊಮ್ಮಕ್ಕಳ ಪ್ರೀತಿಯ ಸಾಂತ್ವನದ ಉಪಚಾರ ಮಾಡುವ ಪರಂಪರೆ ಇದೆ.

ಈ ರೀತಿಯ ಪರಂಪರೆಯನ್ನು ಇನ್ನೂ ಮುಂದಕ್ಕೆ ಉಳಿಸಿ ಕೊಂಡು ಬರಲು, ತಾಯಿಯಾದವಳು ಉಪಾಧ್ಯಾಯರಾದವರು ಹಾಗೂ ಸಮಾಜದ ಸಂಘಟನೆಗಳಾದ, ಮಹಿಳಾ ಸಮಾಜಗಳು ಚಿಕ್ಕ ಮಕ್ಕಳಿಗೆ ಇವುಗಳ ಆದ್ಯತೆಯನ್ನು ಮನಗಾಣುವಂತೆ ಮಾಡಬೇಕಾದ ಕರ್ತವ್ಯವಿದೆ ಎಂದು ಸಂಗಾತಿಯ ಅನಿಸಿಕೆ.

## ಒಲಂಪಿಕ್ಸ್ : ಭಾರತಕ್ಕೆ ಚೊಚ್ಚಲ ಪದಕ

### ಭಾರ ಎತ್ತಿದ ಆಂಧ್ರದ ಮಲ್ಲೇಶ್ವರಿಗೆ ಕಂಚು :

ಸಿಡ್ನಿಯಲ್ಲಿ ನಡೆದಿರುವ ಒಲಿಂಪಿಕ್ಸ್ ಕ್ರೀಡಾಕೂಟದ ನಾಲ್ಕನೆಯ ದಿನದಲ್ಲಿ ಭಾರತವು ಮೊದಲ ಪದಕವನ್ನು ಗಳಿಸಿತು. ಭಾರ ಎತ್ತುವ ಸ್ಪರ್ಧೆಯಲ್ಲಿ ೬೯ ಕೆಜಿ ವರ್ಗದಲ್ಲಿ ಆಂಧ್ರಪ್ರದೇಶದ ಕಡಪಾ ಜಿಲ್ಲೆಯ ೨೫ರ ಹರಯದ ಕುಮಾರಿ ಕರ್ನಾಂ ಮಲ್ಲೇಶ್ವರಿ ಕಂಚಿನ ಪದಕ ಗಳಿಸುವ ಮೂಲಕ ಭಾರತವು ಹೆಮ್ಮೆಯಿಂದ ಬೀಗುವಂತೆ ಮಾಡಿದ್ದಾಳೆ.

ಒಲಂಪಿಕ್ಸ್ ಇತಿಹಾಸದಲ್ಲಿಯೇ ಭಾರತೀಯ ಮಹಿಳೆಯೊಬ್ಬಳು ಪದಕಗಳಿಸಿರುವುದು ಇದೇ ಪ್ರಪ್ರಥಮ. ಸ್ವಾತಂತ್ರ್ಯಾ ನಂತರ ಭಾರತವು ಒಲಂಪಿಕ್ಸ್‌ನಲ್ಲಿ ಗಳಿಸಿರುವ ಮೂರನೆಯ ಪದಕ ಇದು. ಈ ಹಿಂದೆ ೧೯೫೨ರಲ್ಲಿ ಕುಸ್ತಿಯಲ್ಲಿ ಜಾಧವ್ ಹಾಗೂ ೧೯೯೬ರಲ್ಲಿ ಟೆನಿಸ್‌ನಲ್ಲಿ ಲಿಯಾಂಡರ್ ಪೇಸ್ ವೈಯಕ್ತಿಕ ಪದಕಗಳನ್ನು ಗಳಿಸಿದ್ದರು. ಮಲ್ಲೇಶ್ವರಿ ೨೪೦ ಕೆಜಿ (ಸ್ನ್ಯಾಚ್ ೧೧೦ ಕೆಜಿ ಮತ್ತು ಜೆರ್ಕ್ ೧೩೦ ಕೆಜಿ) ಯನ್ನು ಪೂರ್ತಿಗೊಳಿಸಿದರು. ಚೀನಾದ ಲಿನ್ ವೆನಿಂಗ್ ೨೪೨.೫ ಕೆಜಿ ಎತ್ತಿ ಚಿನ್ನದ ಪದಕ ಗೆದ್ದರೆ ಹಂಗರಿಯ ಎರ್ಜ್‌ಬೆತ್ ಮಾರ್ಕುಸ್ ಬೆಳ್ಳಿ ಪದಕ ಗೆದ್ದರು. ಮಲ್ಲೇಶ್ವರಿ ಕಂಚಿನ ಪದಕವನ್ನು ತಮ್ಮದಾಗಿಸಿ ಕೊಂಡರು. ಈಕೆಯ ತರಬೇತುದಾರರಾದ ಪಾಲ್‌ಸಿಂಗ್ ಸಂಧು ಮತ್ತು ಬಲಬೀರ್ ಸಿಂಗ್ ಭಾಟಿಯಾ ತಮ್ಮ ಶಿಷ್ಯೆ ೨೪೦ ಕೆಜಿಯಲ್ಲಿ ಪದಕಗೆಲ್ಲಬಲ್ಲಳೆಂದು ತರಬೇತಿ ವೇಳೆಯೇ ಹೇಳಿದ್ದರು. ಮಲ್ಲೇಶ್ವರಿ ಅಥೆನ್ಸ್ ವರ್ಲ್ಡ್‌ಕಪ್‌ನಲ್ಲಿ ೨೩೦ ಕೆಜಿ ಎತ್ತಿ ೫ನೇ ಸ್ಥಾನಿಯಾಗಿದ್ದರು.

## ಜಮ್ಮ ಕೋವಿ ಪರವಾನಗಿ ವಿನಾಯ್ತಿ ಅಂತರ ರಾಜ್ಯಕ್ಕೂ ವಿಸ್ತರಣೆ

ಕೊಡಗಿನ ಜಮ್ಮ ಕೋವಿಗಳಿಗೆ ಸಂಬಂಧಿಸಿದಂತೆ ಅಂತರ್ ರಾಜ್ಯ ಮಟ್ಟದಲ್ಲಿ ಪರವಾನಗಿಯನ್ನು ವಿಸ್ತರಿಸುವಂತೆ ಕೋರಿ ರಾಜ್ಯ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುವದಾಗಿ ಜಿಲ್ಲಾಧಿಕಾರಿ ಎಂ.ವಿ. ಜಯಂತಿ ಅವರು ಇತ್ತೀಚೆಗೆ ತಿಳಿಸಿದ್ದಾರೆ. ಈ ಸಂಬಂಧ ಅಖಿಲ ಕೊಡವ ಸಮಾಜದ ಅಧ್ಯಕ್ಷರಾದ ಮಾತಂಡ ಮೊಣ್ಣಪ್ಪ ಅವರು ಸಲ್ಲಿಸಿರುವ ಮನವಿಗೆ ಪೂರಕವಾಗಿ ಸ್ಪಂದಿಸಿ, ಪತ್ರವೊಂದನ್ನು ಅವರಿಗೆ ನೀಡಿರುವ ಜಿಲ್ಲಾಧಿಕಾರಿ, ಕೋಡಿರ ಮಂದಣ್ಣ ಅವರಿಗೆ ಸೇರಿದ ಜಮ್ಮ ಕೋವಿಗೆ ಅಂತರರಾಜ್ಯದ ಪರವಾನಿಗೆ ಒದಗಿಸುವ ಉದ್ದೇಶದಿಂದ ಈ ಪ್ರಸ್ತಾವನೆ ಸಲ್ಲಿಸಿರುವದಾಗಿ ತಿಳಿಸಿದ್ದಾರೆ. ಕಡಂಗಮರೂರು ಗ್ರಾಮದ ಕೋಡಿರ ಮಂದಣ್ಣ ಅವರಿಗೆ ವೀರಾಜಪೇಟೆ ತಾಲೂಕು ತಹಶೀಲ್ದಾರ್ ಅವರು ತಾಲೂಕು ವ್ಯಾಪ್ತಿಗೆ ಕೋವಿ ವಿನಾಯ್ತಿ ಪತ್ರ ನೀಡಿದ್ದು, ಪ್ರಸ್ತುತ ಮಂದಣ್ಣ ಅವರು ಕೇರಳದಲ್ಲಿ ಉದ್ಯೋಗದಲ್ಲಿರುವದರಿಂದ ವಿನಾಯ್ತಿ ಪತ್ರದ ಸಿಂಧುತ್ವವನ್ನು ಆ ರಾಜ್ಯಕ್ಕೂ ವಿಸ್ತರಿಸಬೇಕೆಂದು ಕೋರಿದ್ದರು. ಪ್ರಸ್ತುತ ಜಿಲ್ಲಾಧಿಕಾರಿಗಳಿಗೆ ಪರವಾನಿಗೆಗಳ ವ್ಯಾಪ್ತಿಯನ್ನು ಜಿಲ್ಲಾ ಹಾಗೂ ರಾಜ್ಯಮಟ್ಟಗಳಿಗೆ ವಿಸ್ತರಿಸುವ ಅವಕಾಶವಿದ್ದು, ಅಂತರರಾಜ್ಯ ಇಲ್ಲವೇ ರಾಷ್ಟ್ರಮಟ್ಟಕ್ಕೆ ವಿಸ್ತರಿಸುವ ಅಧಿಕಾರ ರಾಜ್ಯ ಸರಕಾರಗಳಿಗೆ ಇರುವುದರಿಂದ ಈ ಸಂಬಂಧ ರಾಜ್ಯ ಸರ್ಕಾರಕ್ಕೆ ಮನವಿ ಸಲ್ಲಿಸಿರುವದಾಗಿ ಜಿಲ್ಲಾಧಿಕಾರಿಗಳು ಪತ್ರದಲ್ಲಿ ವಿವರಿಸಿದ್ದಾರೆ ಎಂದು ತಿಳಿದು ಬಂದಿದೆ.

— ಸಂಗಾತಿ.

ವೈರ್‍ಯದ ನಾಶಕ್ಕೆ ವಾತ್ಸಲ್ಯವೇ ಮದ್ದು

# ಕರ್ನಾಟಕದಲ್ಲಿ ಪತ್ರಿಕೋದ್ಯಮ

ಕರ್ನಾಟಕದಲ್ಲಿ ಪತ್ರಿಕೋದ್ಯಮಕ್ಕೆ ಸುಮಾರು 150ಕ್ಕೂ ಹೆಚ್ಚು ವರ್ಷಗಳ ಇತಿಹಾಸವಿದೆ. ಆದರೆ ಇದಕ್ಕೂ ಹಿಂದೆ ಪತ್ರಿಕೋದ್ಯಮ ಇರಲಿಲ್ಲ ಎಂದುಕೊಂಡಿರಾ? ಇತ್ತು. ಅದು ಕೇವಲ ಮನೆ ಮನೆ ಸುದ್ದಿಯಾಗಿ, ತಮಟೆ, ಡಂಗೂರ, ಟಾಂ ಟಾಂ, ದಾಸಯ್ಯನ ಸುದ್ದಿಗಳು ಪತ್ರಿಕೆಯ ಕೆಲಸವನ್ನೆ ಮಾಡುತ್ತಿದ್ದವು. ಈ ಪತ್ರಿಕೋದ್ಯಮ ಬ್ರಿಟಿಷರ ಕೊಡುಗೆ ಎಂದರೆ ತಪ್ಪಾಗಲಾರದು. ಮೊದಲು ಇವರು ಭಾರತಕ್ಕೆ ವ್ಯಾಪಾರದ ನೆಪ ಮಾಡಿಕೊಂಡು ಬಂದು ತಮ್ಮ ಧರ್ಮ ಪ್ರಚಾರಕ್ಕೆ ಮುಂದಾದರು. ಆಗ ಅವರು ಮಾಡಿದ ಕೆಲಸ ಆಯಾ ಪ್ರಾಂತ್ಯದ ಮಾತೃ ಭಾಷೆಗೆ ಪ್ರಾಧಾನ್ಯತೆ ಕೊಟ್ಟು ಮತ ಪ್ರಚಾರ ಮಾಡಿದರು.

ಧರ್ಮ ಪ್ರಚಾರಕ್ಕೆ ಮೀಸಲಾದ ಕ್ರೈಸ್ತ ಮಿಷನರಿಗಳು ಮಾಧ್ಯಮಗಳನ್ನು ಹುಡುಕಿ ಕರಪತ್ರಗಳ ಮೂಲಕ ಜನರನ್ನು ತಮ್ಮ ಕಡೆಗೆ ಸೆಳೆದರು. ಕನ್ನಡದಲ್ಲಿ ಮೊದಲು ಮುದ್ರಣವನ್ನು ಕಂಡ ಸಾಹಿತ್ಯ ಎಂದರೆ "ಕ್ರೈಸ್ತರ ಬೈಬಲ್". ನಂತರ ಕಲ್ಲಚ್ಚು ಮೂಲಕ ಪತ್ರಿಕೆಯನ್ನು ತಂದರು. ಕನ್ನಡದ ಮೊದಲ ಪತ್ರಿಕೆ ಎಂದರೆ "ಮಂಗಳೂರು ಸಮಾಚಾರ್" ಡಾ.ಮೊಗಲಿಂಗ್ ಅವರು 1843ರಂದು ಮಂಗಳೂರಿನಲ್ಲಿ ಆರಂಭ ಮಾಡಿದರು. ಅದರ ಭಾಷೆಯೂ ಕೂಡ ಜನರನ್ನು ಒಲಿಸಿಕೊಳ್ಳುವಂತಿತ್ತು. ಈ ದೇಶದ ಮನೆಯಲ್ಲಿ ವಾಸಿಸುವ ಪರ್ಯಂತ ಓದುವವರಿಗೆ ಸುಖ ನೆಮ್ಮದಿ ಕೊಡಲಿ" ಎಂಬ ಹಾರೈಕೆಯು ಇತ್ತು.

ಬ್ರಿಟಿಷರು ಭಾರತದಲ್ಲಿ ಮತಪ್ರಚಾರದ ಜೊತೆಗೆ ಲೌಖಿಕ ಸುದ್ದಿಯನ್ನು ಕೂಡ ಪ್ರಕಟಿಸುತ್ತಿದ್ದರು. ನಂತರದ ಪತ್ರಿಕೆಯನ್ನು ಡಾ. ಮೊಗಲಿಂಗ್ ಬೆಳಗಾಂನಲ್ಲಿ "ಕನ್ನಡ ಸಮಾಚಾರ್" ಅನ್ನು ಆರಂಭಿಸಿದರು. ಮುಂಬೈ ಪ್ರಾಂತ್ಯದಲ್ಲಿ "ಕನ್ನಡ ಸುವಾರ್ತೆ"ಯು ಆರಂಭವಾಯಿತು. ಮೈಸೂರು ಸಂಸ್ಥಾನದ ಮಹಾರಾಜರು "ಕರ್ನಾಟಕ ವಾಗ್ ವಿದಾಯ" ಪತ್ರಿಕೆ ಆರಂಭ ಮಾಡಿದರು. 1865ರಲ್ಲಿ ಶ್ರೀನಿವಾಸರು "ಕರ್ನಾಟಕ ಪ್ರಕಾಶಕ", 1867ರಲ್ಲಿ ಭಾಷಂಭಾಷ್ಯರು "ವೃತ್ತಾಂತ" ಪತ್ರಿಕೆಯನ್ನು, ಮೈಸೂರು ಗೆಜೆಟ್ ಇದೇ ವೇಳೆಗೆ ಒಂದು ಶೈಕ್ಷಣಿಕ ಪತ್ರಿಕೆಗಳು, ಮತ ಪ್ರಚಾರ ಪತ್ರಿಕೆಗಳು ಸಾಹಿತ್ಯಿಕ ಪತ್ರಿಕೆಗಳು ಜೊತೆಗೆ ಸ್ವಾತಂತ್ರ್ಯ ಹೋರಾಟ ಪತ್ರಿಕೆಗಳು ಹುಟ್ಟಿಕೊಂಡವು. 1870ರ ವೇಳೆಗೆ ಪತ್ರಿಕೆಗಳ ಬೆಳೆ ಚೆನ್ನಾಗಿಯೆ ಇತ್ತು. ಕ್ರೈಸ್ತ ಧರ್ಮಕ್ಕೆ ವಿರುದ್ಧವಾಗಿ 1895ರಲ್ಲಿ ವೀರಶೈವ ಮತ ಪತ್ರಿಕೆಗಳು ಬಂದವು. 1881ರಲ್ಲಿ "ವೃತ್ತಾಂತ ಚಿಂತಾಮಣಿ" ಮೈಸೂರು ವೆಂಕಟಕೃಷ್ಣ (ತಾತಯ್ಯ) ಸಾಧ್ವಿ ಪತ್ರಿಕೆ" ಯನ್ನು ಆರಂಭ ಮಾಡಿದರು. ಶಿವಮೊಗ್ಗದಲ್ಲಿ "ಜ್ಞಾನೋದಯ" ಮೊದಲ ಜಿಲ್ಲೆಯ ಪತ್ರಿಕೆಯಾಗಿ ಹೊರಬಂದಿತು. "ಬೆನಗಲ್ ರಾಮರಾಯ", "ವಾಗ್ಭೂಷಣ" ಮಾಸಿಕ ಪತ್ರಿಕೆಯನ್ನು ಆರಂಭಿಸಿದರು. "ಸಾಧ್ವಿ" ಸರ್ಕಾರವನ್ನು ಟೀಕಿಸಿದ ಮೊದಲ ಪತ್ರಿಕೆ. ದಿವಾನ್ ಶೇಷಾದ್ರಿ ಅಯ್ಯಂಗಾರ್‌ರ ಪತ್ರಿಕಾ ಸ್ವಾತಂತ್ರ್ಯ ಕಾಯ್ದೆ ಬಂದ ಮೇಲೆ ಪತ್ರಿಕಾ ಸ್ವಾತಂತ್ರ್ಯ ಹೋರಾಟ ಆರಂಭವಾಯ್ತು. ದಿವಾನ್ ಮಾಧವ್‌ರಾವ್ ಅವರ ಪತ್ರಿಕೆ ಕಾಯ್ದೆಯ ವಿರುದ್ಧ ಹಲವು ಪತ್ರಿಕೆಗಳು ಹೋರಾಡಿದವು.

1920ರಲ್ಲಿ ಸಾಮಾನ್ಯ ಪತ್ರಿಕೆ ಯುಗದಲ್ಲಿ ಕ್ರಾಂತಿಯಾಯಿತು. ಮಹಾತ್ಮ ಗಾಂಧಿ ಅವರ ಕರೆಗೆ ಓಗೊಟ್ಟು, ಹೋರಾಟ ಮನೋಭಾವ ಬೆಳೆದು ರಾಜಕೀಯದಲ್ಲಿ ಬದಲಾವಣೆಗೆ ಕಾರಣವಾಯಿತು. ಡಿ. ವಿ. ಜಿ., ಸೀತಾರಾಮಶಾಸ್ತ್ರಿ, ಮುದೋಳ ಕೃಷ್ಣರಾಯ, ಹಡ್ಮೆಕರ್ ಸ್ವಾತಂತ್ರ್ಯ ಹೋರಾಟಗಾರರ ಪತ್ರಿಕೆಗಳು ಬ್ರಿಟಿಷರ ವಿರುದ್ಧ ಬಂಡೆದ್ದವು.

1920ರ ನಂತರ ಪತ್ರಿಕೆಯ ಸುದ್ದಿ ಸಂಗ್ರಹಕ್ಕೆ ಟೆಲಿಗ್ರಾಂ ಬಂದಿತು. ಸುದ್ದಿಗಳ ಸಂಗ್ರಹ ಸುಲಭವಾಯಿತು. ಸುದ್ದಿಯ ವರ್ಗ ಬೆಳೆಯಿತು. ಸುದ್ದಿ ಸಂಸ್ಥೆಗಳು ಹುಟ್ಟಿಕೊಂಡವು. "ರೈಟರ್" ಮೊದಲ ಸಂಸ್ಥೆ., ಎ.ಪಿ.ಐ., ಯು.ಪಿ.ಐ. ಇತ್ಯಾದಿಗಳು. 1935ರಲ್ಲಿ ಯುದ್ಧದ ಕಾಲವಾಗಿ ಸುದ್ದಿಗಳು ಪತ್ರಿಕೆಗಳು ಬೆಳೆಯಲು ಸುದ್ದಿ ಸಂಸ್ಥೆಗಳು ಚಟುವಟಿಕೆಯಿಂದ ಕಾರ್ಯ ಮಾಡತೊಡಗಿದವು.

ಜಿಲ್ಲೆ ಪತ್ರಿಕೆಗಳು, ಸಣ್ಣ ಪತ್ರಿಕೆಗಳು ಹುಟ್ಟಿಕೊಂಡವು. ಬೇರೆ ಭಾಷೆಯಿಂದ ಒಳ್ಳೆಯ ತರ್ಜುಮೆಗಾರರು ಬೆಳೆದುಕೊಂಡರು. ಸ್ವಾತಂತ್ರ್ಯ ಪೂರ್ವದಲ್ಲಿ ಸಂಪಾದಕ, ವರದಿಗಾರ, ಸಹಾಯಕ ಒಬ್ಬನೇ ಆಗಿರುತಿದ್ದ. ಆದರೆ ಈಗ ಪತ್ರಿಕೋದ್ಯಮ ಬದಲಾಗಿದೆ. "ಬಂಡವಾಳಗಾರರು ಬಂಡವಾಳ ಹಾಕಿ ಬಂಡವಾಳ ತೆಗೆಯುತ್ತಿದ್ದಾರೆ. ಈಗ ಸಂಪಾದಕನಿಗೆ ಸ್ವಾತಂತ್ರ್ಯವಿಲ್ಲ, ಮಾಲೀಕ ಹೇಳಿದಂತೆ ಬರೆಯಬೇಕಾಗಿದೆ. ಸುದ್ದಿ ಸಂಗ್ರಹ ಇನ್ನೂ ಸುಲಭವಾಗಿದೆ., ಟೆಲಿಪ್ರಿಂಟರ್, ಟೆಲಿಫೋನ್, ಫ್ಯಾಕ್ಸ್ ಉಪಗ್ರಹ ಮೂಲಕ ವಿಷಯಗಳು ಬರುತ್ತವೆ. ಈಗ ಒಂದು ದೂರದ ದೇಶದಲ್ಲಿ ನಡೆದ ಘಟನೆಯನ್ನು ಕೆಲವೆ ಸೆಕೆಂಡುಗಳಲ್ಲಿ ತರಿಸಿಕೊಳ್ಳುವ ಸೌಲಭ್ಯಗಳು ಈಗ ದೊರೆಯುತ್ತಿವೆ.

ಈಗ ಕರ್ನಾಟಕದಲ್ಲಿ ಹುಟ್ಟಿಸತ್ತ ಪತ್ರಿಕೆಗಳೆ ಹೆಚ್ಚು. ಅದರಲ್ಲಿ ಬದುಕಿರುವ ಪತ್ರಿಕೆಗಳು ಮುಖ್ಯವಾಗಿ ಹೆಚ್ಚು ಪ್ರಸಾರಗೊಳ್ಳುತ್ತಿರುವ ಪತ್ರಿಕೆಗಳು, ಪ್ರಜಾವಾಣಿ, ಕನ್ನಡಪ್ರಭ, ಸಂಯುಕ್ತ ಕರ್ನಾಟಕ, ಉದಯವಾಣಿ, ಸಂಜೆವಾಣಿ, ಈ ಸಂಜೆ, ಲಂಕೇಶ್ ಪತ್ರಿಕೆ, ಹಾಯ್ ಬೆಂಗಳೂರು. ಈ ಪಟ್ಟಿ ಬರೆದರೆ ಪುಟಗಳೇ ಸಾಲದು. ಆದರೆ ಬೇರೆ ಭಾಷೆಗೆ ಬೇರೆ ದೇಶಕ್ಕೆ ಹೋಲಿಸಿದರೆ ನಮ್ಮ ಪತ್ರಿಕೆಗಳು ಏನೇನು ಅಲ್ಲ. ಜಪಾನಿನ ಒಂದು ಪತ್ರಿಕೆ 33 ಕೋಟಿ ಪ್ರಸಾರವು 23 ದೇಶಕ್ಕೆ ಹೋಗುತ್ತವೆ. ಮಕ್ಕಳ ಪತ್ರಿಕೆಗಳೆ 8 ಕೋಟಿಯಂತೆ.

**ಪತ್ರಿಕಾ ಸ್ವಾತಂತ್ರ್ಯ ಮತ್ತು ಕಾನೂನು :** ಅಮೇರಿಕಾದ ಮೂರನೇ ಅಧ್ಯಕ್ಷನ ಪ್ರಕಾರ ಪತ್ರಿಕೆಗಳಿಲ್ಲದ ಸರ್ಕಾರದ ವ್ಯವಸ್ಥೆಗಿಂತ ಸರ್ಕಾರವಿಲ್ಲದಿದ್ದರೂ ಪತ್ರಿಕೆಗಳು ಅಗತ್ಯ ಎಂದಿದೆ. ಪ್ರಜಾ ಪ್ರಭುತ್ವದಲ್ಲಿ ಪತ್ರಿಕೆಗಳ ಪಾತ್ರ ಬಹಳ ಮುಖ್ಯ. ರಾಜ್ಯಶಾಸ್ತ್ರಜ್ಞರ ಪ್ರಕಾರ ಇದು ಸಂವಿಧಾನದ ನಾಲ್ಕನೆಯ ಅಂಗ ಎಂದು ಪರಿಗಣಿಸಿದ್ದಾರೆ. ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗದ ಕಾರ್ಯ ವೈಫಲ್ಯಗಳನ್ನು ಎತ್ತಿ ಹಿಡಿಯುವುದೆ ಪತ್ರಿಕೆ.

20ನೆಯ ಶತಮಾನದ ವೇಳೆಗೆ ಭಾರತದಲ್ಲಿ ಆಂದೋಲನಕ್ಕೆ ಕಾರಣವಾದವು. ಬಾಲಗಂಗಾಧರ ತಿಲಕ್ "ಕೇಸರಿ", ಗಾಂಧೀಜಿ

ಅವರ "ಯಂಗ್ ಇಂಡಿಯಾ" "ನವ ಜೀವನ" ತಮ್ಮ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದ್ದವು.

ಪತ್ರಿಕೆಗಳು ಬೆಳೆದಂತೆ ಅವುಗಳ ನಿಯಂತ್ರಣ ಮಾಡಲು ಸಿಪಾಯಿ ದಂಗೆಯ ನಂತರ "ಈಸ್ಟ್ ಇಂಡಿಯಾ ಕಂಪೆನಿ" ಅನೇಕ ನಿಯಂತ್ರಣ ಕಾನೂನುಗಳನ್ನು ತಂದವು. ವೆಲ್ಲೆಸ್ಲಿ ನಿಯಮಗಳ ಪ್ರಕಾರ ಕ್ರೂರ ಶಿಕ್ಷೆಯನ್ನು, ಗಡಿಪಾರು ಶಿಕ್ಷೆಯನ್ನು ಅನುಭವಿಸ ಬೇಕಾಗಿತ್ತು. ಮೇಕಾಲೆ ಪತ್ರಿಕೋದ್ಯಮದ ಮೊದಲ ಸಮಗ್ರ ಕಾನೂನು "The Press and Registration of Book Act 1867" ತಂದನು. ತಿಲಕ್ ಬ್ರಿಟಿಷರ ವಿರುದ್ಧ ಬರೆದಿದ್ದರಿಂದ ಅನೇಕ ಬಾರಿ ಜೈಲು ಶಿಕ್ಷೆಯನ್ನು ಅನುಭವಿಸಬೇಕಾಯಿತು. ಇಂತಹ ಶಿಕ್ಷೆಗಳಿಂದ ಗಾಂಧಿ ಅವರು ಕೂಡ ಹೊರತಾಗಿರಲಿಲ್ಲ.

ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ವಾಕ್ ಸ್ವಾತಂತ್ರ್ಯ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹೊಂದಬೇಕು. ಭಾರತದ ಸಂವಿಧಾನದಲ್ಲಿ ಕಲಂ 19(1) (ಎ) ಪ್ರಕಾರ ವಾಕ್‌ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ ಮೂಲಭೂತ ಹಕ್ಕು ಕೊಟ್ಟಿದ್ದಾರೆ. ಪತ್ರಿಕಾ ಸ್ವಾತಂತ್ರ್ಯ ಅದರಲ್ಲೆ ಒಳಗೊಂಡಿದೆ. ಪತ್ರಿಕಾ ಸ್ವಾತಂತ್ರ್ಯ ಎಂದರೆ; ನ್ಯಾಯಮೂರ್ತಿ ಲಾರ್ಡ್ ಮೇನ್ಸ್ ಫೀಲ್ಡ್ ಪ್ರಕಾರ "ಏನನ್ನಾದರೂ ಪೂರ್ವಭಾವಿ ನಿಯಂತ್ರಣವಿಲ್ಲದೆ ಕಾನೂನಿನ ಚೌಕಟ್ಟಿಗೆ ಒಳಪಟ್ಟು ಪ್ರಕಟಿಸುವುದು, ಪ್ರಜಾಪ್ರಭುತ್ವದಲ್ಲಿ ಪ್ರಜಾ ವಿರೋಧಿಯಾದ ಸರ್ಕಾರ ಬಿದ್ದು ಹೋಗುತ್ತದೆ. ಇದನ್ನು ತಿಳಿಸುವುದೆ ಪತ್ರಿಕೆ. ಎಲ್ಲಾ ಮಾಧ್ಯಮ ಗಳಿಗಿಂತ ಪ್ರಬಲವಾದ ಮಾಧ್ಯಮ ಪತ್ರಿಕೆ. ಪತ್ರಿಕೆ ಸ್ವೇಚ್ಛೆಯಾಗ ಬಾರದು. ಒಬ್ಬನ ಹಕ್ಕು ಇನ್ನೊಬ್ಬನ ಹಕ್ಕು ಎನ್ನುವ ಮೊದಲೆ ಪತ್ರಿಕೆಗೆ ನಿಯಂತ್ರಣ ಅಗತ್ಯದಲ್ಲಿ ರಬೇಕಾಗುತ್ತದೆ.

ಮಾಧ್ಯಮಗಳು ಈ ಕೆಳಗಿನ ನಿಯಮಗಳನ್ನು ಮೀರಿದಾಗ ಅದು ಕಾನೂನುಬಾಹಿರ ಎಂದು ತೀರ್ಮಾನಿಸಲಾಗುವುದು. ೧. ರಾಷ್ಟ್ರದ ಭದ್ರತೆಗೆ ಧಕ್ಕೆ ಬಂದಾಗ, ೨. ವಿದೇಶಗಳೊಡನೆ ಸುಮಧುರ ಸಂಬಂಧಕ್ಕೆ ಧಕ್ಕೆಯಾದಾಗ, ೩. ಸಾರ್ವಜನಿಕ ಸುವ್ಯವಸ್ಥೆಗೆ ತೊಂದರೆಯಾದಾಗ, ೪. ನೈತಿಕತೆ ಮತ್ತು ಸಭ್ಯತೆಗೆ ಅಡ್ಡಿಯಾದರೆ, ೫. ನ್ಯಾಯಾಲಯದ ನಿಂದನೆ, ೬. ಮಾನನಷ್ಟವಾದರೆ, ೭. ಅಪರಾಧ ಪ್ರಚೋದನೆ, ೮. ರಾಷ್ಟ್ರದ ಸಮಗ್ರತೆ ಮತ್ತು ಸಾರ್ವಭೌಮತ್ವಕ್ಕೆ ಹಾನಿ ಮಾಡಿದರೆ ಶಾಸನ ಸಭೆಗಳು ತನ್ನದೆ ಆದ ಕೆಲವು ನಿಯಮಗಳನ್ನು ಅನುಸರಿಸುತ್ತದೆ. ಅವುಗಳನ್ನು ನೇರವಾಗಿ ಪ್ರಕಟಿಸಬಾರದು ಹಾಗೆ ಮಾಡಿದರೆ ಆ ಪತ್ರಿಕೆಯ ಸಂಪಾದಕನನ್ನು ಸಭೆಗೆ ಕರೆಸಿ ಛೀಮಾರಿಹಾಕಬಹುದು.

ಪತ್ರಿಕೆಗಳು ತಮ್ಮನ್ನು ರಕ್ಷಿಸಿಕೊಳ್ಳಲು 1978ರಲ್ಲಿ ಪತ್ರಿಕಾ ಮಂಡಳಿ (ಪ್ರೆಸ್ ಕೌನ್ಸಿಲ್ ಆಕ್ಟ್) ಕಾಯ್ದೆ ಜಾರಿಗೆ ತಂದರು. ಹಳೆಯ ಕಾಯ್ದೆಗಳನ್ನು ರದ್ದು ಮಾಡಿ ಹೊಸ ಕಾಯ್ದೆಗಳನ್ನು ಮಾಡಿದ್ದಾರೆ. ಪತ್ರಿಕಾರಂಗದ ಪ್ರಭಾವಿ ಕಾಯ್ದೆಗಳಾಗಿವೆ.

ಪತ್ರಿಕೆಗಳು ಒಂದು ದೇಶದ ಅಧ್ಯಪನವನ್ನೇ ಬದಲಾಯಿಸ ಬಹುದು. (ವಾಟರ್ ಗೇಟ್ ಪ್ರಕರಣ) ಇಂದಿನ ಬಿಲ್ ಕ್ಲಿಂಟನ್ ಪ್ರಕರಣ ಕೂಡ, ಪತ್ರಿಕೆಗಳ ಪಾತ್ರ ಮಹತ್ವದಾಗಿದೆ. ಪತ್ರಿಕಾ ರಂಗ ನೈತಿಕತೆಯಿಂದ ಕೂಡಿರಬೇಕು. ಪತ್ರಕರ್ತ ಆದರ್ಶ ವ್ಯಕ್ತಿಯಾಗಿರ ಬೇಕು. ಹಿಂದಿನ ಅನೇಕ ಆದರ್ಶ ನಾಯಕರುಗಳಾದ, ಗಾಂಧಿ, ತಿಲಕ್, ಮೋಹನ್‌ರಾಯರುಗಳು ಪತ್ರಿಕೆಯನ್ನು ನಡೆಸಿದ್ದಾರೆ. ಅವರ ಆದರ್ಶ ಇಂದಿನ ಪತ್ರಿಕೆಗಳ ಮೇಲಿದೆ.

**ವರದಿ ಮಾಡುವ ಕ್ರಮ :** ಸುದ್ದಿಯನ್ನು ಹುಟ್ಟು ಹಾಕುವವರು ಯಾರು? ಯಾವಾಗ? ಎಲ್ಲಿ? ಎಂಬುದು ತಿಳಿಯುವುದಿಲ್ಲ. ಸುದ್ದಿಯ ಮೂಲಗಳು ನೆಲದಿಂದ ಆಕಾಶದವರೆಗೂ ಹಬ್ಬಿರುತ್ತದೆ. ಸುದ್ದಿಯನ್ನು ವರದಿ ಮಾಡುವಾಗ ವರದಿಗಾರನಿಗೆ ಇರಬೇಕಾದ ಕೆಲ ವೈಶಿಷ್ಟ್ಯಗಳು ಎಂದರೆ ೧. ಪ್ರಾಮಾಣಿಕತೆ ಇರಬೇಕು, ೨. ಹಿಂಸಾಚಾರಕ್ಕೆ ಉತ್ತೇಜನ ಕೊಡುವ ಸುದ್ದಿಯನ್ನು ವರದಿ ಮಾಡಬಾರದು, ೩. ಎದೆಗಾರಿಕೆ ಬೇಕು, ೪. ಚಾಣಾಕ್ಷತನ ವಿರಬೇಕು, ೫. ತಾಳ್ಮೆ ಇರಬೇಕು, ೬. ಕೋಮುಗಳ ಮಧ್ಯ ಕಲಹವಾಗುವ ಸುದ್ದಿ ಬರೆಯಬಾರದು ೭. ಅಶ್ಲೀಲವಾಗಿ ಬರೆಯ ಬಾರದು, ೮. ಸುದ್ದಿ ಸತ್ಯಕ್ಕೆ ಹತ್ತಿರವಾಗಿರಬೇಕು. ೯. ಸುದ್ದಿ ಕೊಡುವವರನ್ನು ನಂಬಬಾರದು ಸ್ಥಳಕ್ಕೆ ಹೋಗಿ ಪರಿಶೀಲಿಸ ಬೇಕು. ೧೦. ಮುಖ್ಯವಾಗಿ ಸುದ್ದಿ ಮೂಲವನ್ನು ಯಾರಿಗೂ ಹೇಳಬಾರದು. ಕೊಲೆ, ಕ್ರೀಡೆ ಹಾಗೂ ದುರುಪಯೋಗ ಇಂತಹ ವಿಷಯಗಳನ್ನು ವರದಿ ಮಾಡುವಾಗ ಬುದ್ಧಿವಂತಿಕೆ ಇರಬೇಕು. ಸುದ್ದಿ ಬರೆಯುವಾಗ ನಿಷ್ಠುರತೆ ಇರಬೇಕು. ಭಾಷೆ ಸರಳವಾಗಿರ ಬೇಕು. ಹೊಸ ಹೊಸ ಪದಗಳ ಬಳಕೆ ಓದುಗನನ್ನು ಸಂತೋಷ ಪಡಿಸುವಂತಿರಬೇಕು. ಕಛೇರಿ ಸುದ್ದಿ ವರದಿ ಮಾಡುವಾಗ ಅಂಕಿ ಅಂಶಗಳನ್ನು ಕೊಡಬೇಕು. ವೈಯಕ್ತಿಕ ದ್ವೇಷಕ್ಕೆ ತನಿಖಾ ವರದಿ ಮಾಡಬಾರದು.

**ಸುದ್ದಿ ಸಂಸ್ಥೆಗಳು :** ದಿನ ಪತ್ರಿಕೆಗಳು ಸುದ್ದಿ ಸಂಗ್ರಹಕ್ಕೆ ಎಲ್ಲಾ ಕಡೆಗಳಲ್ಲಿ ಇರಲು ಸಾಧ್ಯವಾಗುವುದಿಲ್ಲ. ಪತ್ರಿಕೆಗಳಿಗೆ ಸುದ್ದಿಯನ್ನು ಕೊಡಲೆಂದೆ ಹಲವು ಸುದ್ದಿ ಸಂಸ್ಥೆಗಳು ಹುಟ್ಟಿ ಕೊಂಡಿದೆ. ಅವುಗಳ ಕೆಲಸ ಕೇವಲ ಸುದ್ದಿಗಳನ್ನು ಒದಗಿಸುವುದು ಅಷ್ಟೆ. ಅಂತಹ ಸುದ್ದಿಗಳು ವಿದೇಶಗಳಿಂದಲೂ ಸುದ್ದಿಯನ್ನು ತರಿಸಿಕೊಳ್ಳುತ್ತದೆ ಮತ್ತು ಕಳುಹಿಸುತ್ತದೆ ಅಂತಹ ಸಂಸ್ಥೆಗಳು ಮುಖ್ಯವಾದುವು UNI (United News lireist) PTI (Press Trust of India) ರೈಟರ್, ಸಮಾಚಾರ್ ಭಾರತಿ, ಹಿಂದೂ ಸಮಾಚ್ ಸುದ್ದಿ ಸಂಸ್ಥೆಗಳು ಮುಖ್ಯವಾಗಿ ಕೆಲಸ ಮಾಡುತ್ತಿವೆ

ದೂರದರ್ಶನ, ರೇಡಿಯೋ ಇವುಗಳು ಸಂದರ್ಶನ ಮಾಧ್ಯಮಗಳು. ಆದರೆ ಇವುಗಳಿಗೆ, ಪತ್ರಿಕೆಗಳಿಗೆ ಇರುವಷ್ಟು ಸ್ವಾತಂತ್ರ್ಯ ಇರುವುದಿಲ್ಲ. ಕಾರಣ ಇವು ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು ರಾಷ್ಟ್ರದ ಅಭಿವೃದ್ಧಿ, ರಾಜಕೀಯ ವಿಜ್ಞಾನ ವಿಷಯಗಳನ್ನು ಮಾತ್ರ ತಿಳಿಸುತ್ತವೆ. ಕೊಲೆ, ದರೋಡೆ, ಇತ್ಯಾದಿ ವಿಷಯಗಳಿಗೆ ಪ್ರಾಮುಖ್ಯತೆ ಕೊಡುವುದಿಲ್ಲ, ಪ್ರಸಾರ ಭಾರತಿ ಸ್ವಾತಂತ್ರ್ಯ ಕೊಟ್ಟರೆ ಎಷ್ಟರ ಮಟ್ಟಿಗೆ ಕಾರ್ಯ ನಿರ್ವಹಿಸುತ್ತವೆ ಎಂಬುದನ್ನು ಕಾದು ನೋಡಬೇಕಾಗಿದೆ. ರಾಜ್ಯದಲ್ಲಿ 18 ಮುಖ್ಯ ರೇಡಿಯೋ ಕೇಂದ್ರಗಳು ಕೆಲಸ ಮಾಡುತ್ತವೆ ಇನ್ನೂ ಕೆಲವೆ ವರ್ಷಗಳಲ್ಲಿ

ಪ್ರತಿ ಜಿಲ್ಲೆಯಲ್ಲಿಯೂ ಎಫ್.ಎಂ(ಮಾಡಿಫೌಡ್ ಫ್ರಿಕ್ವೆನ್ಸಿ) ಕೇಂದ್ರಗಳು ಆರಭವಾಗಲಿವೆ. 1935ರಲ್ಲಿ ಭಾರತದಲ್ಲಿಯೇ ಮೊದಲ ಬಾರಿಗೆ ಮೈಸೂರಿನಲ್ಲಿ ಆಕಾಶವಾಣಿ ಆರಂಭವಾಯಿತು. 1982ರಲ್ಲಿ ಬೆಂಗಳೂರಿನಲ್ಲಿ ದೂರದರ್ಶನ ಕೇಂದ್ರ ಆರಂಭ ವಾಯಿತು. ಪ್ರಸಾರಕ್ಕೆ ಹೆಚ್ಚು ಖರ್ಚು ಆಗುವುದಿಲ್ಲ. ಆದರೆ ಕಾರ್ಯಕ್ರಮ ರೂಪಿಸಲು ಹೆಚ್ಚು ವೆಚ್ಚ ತಗಲುತ್ತದೆ. ಇವು ಸುದ್ದಿ ಸಂಸ್ಥೆಗಳಿಂದ ಸುದ್ದಿಯನ್ನು ತರಿಸಿಕೊಳ್ಳುತ್ತವೆ.

**ಛಾಯಾ ಚಿತ್ರ - ಪತ್ರಿಕೋದ್ಯಮ :** ಚೀನಿಗಾದೆ ಛಾಯ ಚಿತ್ರ ಪತ್ರಿಕೋದ್ಯಮಕ್ಕೆ ಒಳ್ಳೆಯ ಮಾತು. **"ಒಂದು ಚಿತ್ರ ಸಾವಿರ ಪದಗಳಿಗೆ ಸಮ"**. ಒಂದು ವಿವರಿಸಲಾಗದ ಘಟನೆಯನ್ನು ಚಿತ್ರದ ಮೂಲಕ ತೋರಿದರೆ ಎಲ್ಲಾರಿಗೂ ಅರ್ಥವಾಗುತ್ತದೆ. ಉದಾ : ರಾಜೀವ ಗಾಂಧಿ ಅವರು ಮಾನವ ಬಾಂಬಿಗೆ ಬಲಿಯಾದುದನ್ನು ಎಷ್ಟೆ ವಿವರಿಸಿದರು ಅವರ ದೇಹದ ಛಿದ್ರತೆಯ ಅರಿವು ಬರುವುದಿಲ್ಲ. ಅದರ ಬದಲು ಒಂದು ಛಾಯ ಚಿತ್ರ ಪ್ರಕಟ ಗೊಂಡರೆ ಅದರ ತೀಕ್ಷ್ಣತೆ ತಿಳಿಯುತ್ತದೆ. ಛಾಯ ಚಿತ್ರದಂತೆ ವ್ಯಂಗ್ಯ ಚಿತ್ರ ಕೂಡ ಒಬ್ಬ ವ್ಯಕ್ತಿಯ ಅಣಕಕ್ಕೆ ದಾರಿಯಾಗುತ್ತದೆ. ಅದನ್ನು ತಿದ್ದಿ ಕೊಳ್ಳಲು ಅವಕಾಶವಾಗುತ್ತದೆ.

ನುಡಿಚಿತ್ರ (Feture) ಇವು ಗಳಿಗೆ ನಿಖರವಾದ ವಿಷಯ, ವಸ್ತುಗಳೇ ಇಲ್ಲ. ಒಂದು ಸನ್ನಿವೇಶವಾಗಬಹುದು, ಘಟನೆಯಾಗ ಬಹುದು, ಸೆರೆಹಿಡಿದು ಸೃಜನ ಶೀಲತೆಯಿಂದ ಒಂದು ನುಡಿಚಿತ್ರ ಮನರಂಜನೆ ನೀಡುವಂತಿರಬೇಕು. ಇದು ಸುದ್ದಿಯ ಹಾಗೆ ಅಲ್ಲ. ಇಲ್ಲಿ ವರ್ಣನೆಗೆ ಅವಕಾಶವಿದೆ. feature story is meta story" ತನ್ನ ಅಪೇಕ್ಷೆಯಂತೆ ಬರೆಯುವ ಅವಕಾಶವಿದೆ.

ಭಾರತದಲ್ಲಿ ಅನೇಕ ಸಣ್ಣ ಸಣ್ಣ ಪತ್ರಿಕೆಗಳು ಹುಟ್ಟಿ ಕೊಳ್ಳುತ್ತಿವೆ. ಆದರೆ ಅವುಗಳು ಹೆಚ್ಚು ಕಾಲ ಬದುಕಲು ಸಾಧ್ಯವಾಗುತ್ತಿಲ್ಲ. ಕಾರಣ ಇಂದಿನ ಆಧುನಿಕ ತಂತ್ರಜ್ಞಾನಗಳನ್ನು ಅದು ಬಳಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಅವುಗಳಿಗೆ ಜಾಹಿರಾತಿನ ತೊಂದರೆಗಳು, ಸರ್ಕಾರ ಈ ಪತ್ರಿಕೆಗಳಿಗೆ ರಿಯಾಯಿತಿಯಲ್ಲಿ ಕಾಗದ ಒದಗಿಸಲು ಇರುವ ಕೆಲವು ನಿಬಂಧನೆಗಳನ್ನು ಇವು ವಹಿಸಲು ಸಾಧ್ಯವಾಗುತ್ತಿಲ್ಲ.

ಒಂದು ಉತ್ತಮ ಪತ್ರಿಕೆಯಾಗ ಬೇಕಾದರೆ, ಆ ಪತ್ರಿಕೆ ಸಾರ್ವಜನಿಕರ ಜೊತೆ ಇಟ್ಟುಕೊಂಡಿರುವ ಸಂಬಂಧಗಳು ಕೂಡ ಆ ಪತ್ರಿಕೆಯು ಯಶಸ್ವಿಯಾಗಲು ಸಾಧ್ಯ ಎಂದರೆ ತಪ್ಪಾಗಲಾರದು.

— ಪ್ರಭಾಕರ ಪಟ್ಟಡ

## ಪುಟ್ಟ ಬಾಲಕನ ಕಂಪ್ಯೂಟರ್ ಪ್ರತಿಭೆ

ಅತಿ ಚಿಕ್ಕ ವಯಸ್ಸಿನಲ್ಲೇ ನೆನಪಿನ ಸಾಮರ್ಥ್ಯ, ಸಾಮಾನ್ಯ ಜ್ಞಾನ, ಕಂಪ್ಯೂಟರ್ ಬಳಕೆ ಇತ್ಯಾದಿ ಕ್ಷೇತ್ರಗಳಲ್ಲಿ ಅದ್ಭುತ ಸಾಧನೆ ಮಾಡಿರುವ ದಕ್ಷಿಣ ಕನ್ನಡ ಜಿಲ್ಲೆಯ ಮಹಮದ್ ಸ್ವರೂಪ್ ಈಗ ವಿಶ್ವದ ಗಮನ ಸೆಳೆಯಲು ತಯಾರಿ ನಡೆಸಿದ್ದಾನೆ. ಇದರ ಸಲುವಾಗಿಯೇ ಕರೆದಿದ್ದ ಪತ್ರಿಕಾಗೋಷ್ಠಿಯಲ್ಲಿ ಸ್ವರೂಪ್‌ನ ಪ್ರತ್ಯೇಕ ವೆಬ್‌ಸೈಟ್(ವೆಬ್‌ಸೈಟ್: www.IQtot.comh ಉದ್ಘಾಟಿಸಲಾಯಿತು. ಮಂಗಳೂರಿನ ಶ್ರೀಗುರು ಇನ್‌ಫೋಟೆಕ್ ಸಂಸ್ಥೆ ಸಿದ್ಧಗೊಳಿಸಿರುವ ವೆಬ್‌ಸೈಟ್‌ನಲ್ಲಿ ಸ್ವರೂಪ್ ಮತ್ತು ಅವರ ಕುಟುಂಬ ವರ್ಗದ ಪೂರ್ಣ ಮಾಹಿತಿ ಇದೆ. ಸ್ವರೂಪ್‌ಗಿರುವ ವಿಶಿಷ್ಟ ಕಂಪ್ಯೂಟರ್ ಜ್ಞಾನ ಮತ್ತು ಅದನ್ನು ಪಡೆದ ಬಗ್ಗೆ ಇತ್ಯಾದಿ ವಿವರಗಳನ್ನು ವೆಬ್‌ಸೈಟ್‌ನಲ್ಲಿ ಅಳವಡಿಸಲಾಗಿದೆ. ಸ್ವರೂಪ್ ತನ್ನ ಬೆತ್ತಲೆ ಮೈನಲ್ಲಿ ನೀರಿನಲ್ಲಿ ಆಟವಾಡುತ್ತಿರುವ ವಿಶಿಷ್ಟ ಛಾಯಾಚಿತ್ರಗಳೂ ಇವೆ.

ಸ್ವರೂಪ್ ಕೇವಲ ಒಂದು ವರ್ಷ ನಾಲ್ಕು ತಿಂಗಳ ಮಗುವಾಗಿದ್ದಾಗ, ಒಂದೇ ದಿನದಲ್ಲಿ ಇಂಗ್ಲಿಷ್ ವರ್ಣಮಾಲೆಯನ್ನು ಕಲಿತು ತನ್ನ ಪ್ರತಿಭೆಯನ್ನು ಪ್ರದರ್ಶಿಸಿದ್ದ. ಇದು ಸ್ವತಃ ಅವನ ಪೋಷಕರಿಗೇ ಆಶ್ಚರ್ಯವನ್ನು ಉಂಟುಮಾಡಿತ್ತು. ಪ್ರಪಂಚದ ಭೂಪಟಗಳನ್ನು ನೋಡಿಯೇ ಆ ರಾಷ್ಟ್ರಗಳ ಹೆಸರುಗಳನ್ನು ನಿರರ್ಗಳವಾಗಿ ಹೇಳುವ, ವಿಶ್ವದ ಅತಿ ದೊಡ್ಡ ಶ್ರೀಮಂತ ಯಾರು ಎಂದು ಪ್ರಶ್ನಿಸಿದ ತಕ್ಷಣವೇ ಬಿಲ್‌ಗೇಟ್ಸ್ ಎನ್ನುವ ಸ್ವರೂಪ್ ತಕ್ಷಣ ಇದಕ್ಕೆ ಪ್ರೇಕ್ಷಕರಿಂದ ಚಪ್ಪಾಳೆಯ ಪ್ರತಿಕ್ರಿಯೆ ಬಯಸುತ್ತಾನೆ. ಚಪ್ಪಾಳೆ ನಿಧಾನ ಆಯಿತೆಂದರೆ ಜೋರಾಗಿ ಹೊಡೆಯಿರಿ ಎಂದು ಮೈಕ್‌ನಲ್ಲಿಯೇ ಪ್ರೇಕ್ಷಕ ವರ್ಗವನ್ನು ಕೇಳುತ್ತಾನೆ.

ಕೇವಲ ಎರಡು ವರ್ಷ ನಾಲ್ಕು ತಿಂಗಳಲ್ಲಿ ಕಂಪ್ಯೂಟರ್ 'ವಿಂಡೋಸ್' ತೆರೆದು, ಮುಕ್ತಾಯ ಮಾಡುವುದು ಕಂಟ್ರೋಲ್ ಪ್ಯಾನಲ್, ಕೀಬೋರ್ಡ್ ಪೂರ್ಣ ಪರಿಚಯ, ಮೈಕ್ರೋ ಸಾಫ್ಟ್ ವೇರ್, ಫೈಲ್ ಓಪನ್, ಮ್ಯೂಸಿಕ್ ಸೆಲೆಕ್ಷನ್, ಫೋಟೋ ಸ್ಕ್ಯಾನಿಂಗ್, ಚಿತ್ರಬಿಡಿಸುವುದು, ಇ-ಮೇಲ್ ಕಳಿಸುವುದು ಮತ್ತು ನೋಡುವ ವಿಧಾನವನ್ನು ಯಾರ ನೆರವಿಲ್ಲದೆ ಮಾಡುತ್ತಾನೆ. ಇದನ್ನು ಪತ್ರಿಕಾಗೋಷ್ಠಿಯಲ್ಲೂ ಪ್ರದರ್ಶಿಸಿದ್ದಾನೆ. ಐ ಲವ್ ಯೂ ಇಂಡಿಯಾ' ಎಂದು ಬರೆದು ಅಲ್ಲಿದ್ದವರ ಮೈ ನವಿರೇಳಿಸಿದ.

ಪುತ್ತೂರು ತಾಲೂಕು ಶರವೂರು ಗ್ರಾಮದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯ ಶಿಕ್ಷಕ ಮಹಮದ್ ರಫೀಕ್ ಮತ್ತು ಶ್ರೀಮತಿ ಆತಿಕ ಅವರ ಮಗ ಸ್ವರೂಪ್‌ಗೆ ಡಾ.ಡಿ. ವೀರೇಂದ್ರ ಹೆಗ್ಗಡೆಯವರ ಬೆಂಬಲ ಕೂಡ ಇದೆ. ಸ್ವರೂಪ್ ಬುದ್ಧಿಶಕ್ತಿ ಕಂಡ ಹೆಗ್ಗಡೆ ಅವರು ಅವನಿಗೆ ಉಚಿತವಾಗಿ ಕಂಪ್ಯೂಟರ್ ಕೊಡುಗೆಯಾಗಿ ನೀಡಿದ್ದಾರೆ. ಆದರೆ. 'ದಿನೇ ದಿನೇ ಈತನ ಬುದ್ಧಿ ಶಕ್ತಿ ವೃದ್ಧಿಸುತ್ತಿದ್ದು, ಸದಾ ಹೊಸದನ್ನು ಕಲಿಯಲು ಹೆಚ್ಚು ಆಸಕ್ತಿ ವಹಿಸುತ್ತಿದ್ದಾನೆ' ಎನ್ನುತ್ತಾರೆ ಆತನ ತಂದೆ ರಫೀಕ್.

ವೆಬ್‌ಸೈಟ್ ಸಿದ್ಧಗೊಳಿಸಿದ ಮಂಗಳೂರಿನ ಗುರು ಇನ್‌ಫೋಟೆಕ್ ಮಾಲೀಕ ಡಾ. ರವಿಚಂದ್ರನ್ ಪತ್ರಿಕಾ ಗೋಷ್ಠಿಯಲ್ಲಿ ಉಪಸ್ಥಿತರಿದ್ದು ಸಹಕರಿಸಿದ್ದಾರೆ.

– ವರದಿ ಸಂಗಾತಿ.




✦ ಕೌಂಡಿನ್ಯ

ಧಾರವಾಹಿ -39

ಅದು ಈಶ್ವರನ ಲಿಂಗ !

ನಂದಾ ದೀಪ ಉರಿಯುತ್ತಿದೆ !

ಹಾರವನ್ನು ಹಾಕಲಾಗಿದೆ.

ರೇವತಿ ಭಕ್ತಿಯಿಂದ ನಮಸ್ಕರಿಸಿ ಗರ್ಭಗುಡಿಯ ಅಂಗುಲ ಅಂಗುಲವನ್ನು ಸಹ ಶೋಧಿಸಲಾರಂಭಿಸಿದಳು.

ಅದು ಪಾಳೇಯಗಾರರ ಕಾಲದ ದೇವಸ್ಥಾನ ! ಏಕಳತೆಯ ಕಟ್ಟಡ ! ಬಹು ರಮ್ಯವಾಗಿದೆ.

ರೇವತಿಯ ದೃಷ್ಟಿಗೆ ಈಶಾನ್ಯದ ದಿಕ್ಕಿನಲ್ಲಿರುವ ವಿಚಿತ್ರ ವಸ್ತು ಕಂಡಿತು.

ಕಲ್ಲಿಗೆ ಹೊಂದಿಕೊಂಡಿದ್ದ ಚಕ್ರ !

ಅದೇಕೋ ಅನುಮಾನ ಬಂದು ಆ ಚಕ್ರವನ್ನು ಎಡದಿಂದ ಬಲಕ್ಕೆ ತಿರುಗಿಸಿದಳು.

ಊ...... ಹೂಂ.... ಅಲುಗಾಡಲಿಲ್ಲ !

ಎರಡು ಕೈಗಳಿಂದ ಪ್ರಯತ್ನಿಸಿದಳು.

ಈಶಾನ್ಯ ಭಾಗದಿಂದ ಹತ್ತು ಹೆಜ್ಜೆಗಳ ಮುಂದೆ ನೆಲ ನಿಶ್ಶಬ್ದವಾಗಿ ಬಾಯಿ ತೆರೆದು ಕೊಂಡಿತು.

ಅಲ್ಲಿ... ಅಲ್ಲಿ ಮೆಟ್ಟಿಲುಗಳು ಕಂಡಿತು ! ರೇವತಿ ಬೆಚ್ಚಿ ಬಿದ್ದಳು. ಹಿಂದೆ ಪಾಳೇಯ ಗಾರರರು ಶತ್ರು ರಾಜರುಗಳಿಂದ ತಪ್ಪಿಸಿ ಕೊಳ್ಳಲು ಇಂತಹ ಸುರಂಗ ಮಾರ್ಗವನ್ನು ಹಲವಾರು ಕಡೆ ಮಾಡಿಕೊಂಡಿರುತ್ತಿದ್ದರು.

ರೇವತಿ ಉರಿಯುತ್ತಿದ ಗರ್ಭಗುಡಿಯ ದೀಪವನ್ನು ಎತ್ತಿಕೊಂಡು ಒಳಗೆ ಇಳಿದಳು.

ಹತ್ತು ಮೆಟ್ಟಿಲುಗಳನ್ನು ಇಳಿದ ಕೂಡಲೇ ಒಂದು ಸಣ್ಣ ಕಲ್ಲಿನ ಕೊಠಡಿ ಕಂಡಿತು !

ಕತ್ತಲು ಆವರಿಸಿತ್ತು.!

ನಂದಾ ದೀಪದಿಂದ ಬೆಳಕಿನ ಸಹಾಯದಿಂದ ರೂಮಿನಲ್ಲಿ ಇರುವ ವಿಚಿತ್ರ ವಸ್ತುಗಳನ್ನು ಕಂಡಳು.

ಶ್ರೀಗಂಧದ ಕೊರಡು...... ತೇಯುವ ಕಲ್ಲು ! ಪ್ಲಾಸ್ಟಿಕ್ ಕವರ್‌ಗಳಲ್ಲಿ ಹಲವಾರು ರೀತಿಯ ಗಿಡಗಳ ಎಲೆಗಳನ್ನು ಕತ್ತರಿಸಿ ತುಂಬಲಾಗಿತ್ತು.

ಗಾಳಿಗೆ ಹೋಗದಂತೆ ಸೀಲ್ ಮಾಡಲಾಗಿತ್ತು !

ಮೂಲೆಯಲ್ಲಿ ಒಂದು ಸ್ಟೀಲ್ ಡಬ್ಬಿ ಕಂಡಿತು. ಕುತೂಹಲದಿಂದ ಅದನ್ನು ಎತ್ತಿಕೊಂಡು ನೋಡಿದಳು !

ಇದೇ ತರಹದ ಮತ್ತೊಂದು ಡಬ್ಬಿಯನ್ನು ಈಗ ತಾನೇ ಪೂಜಾರಿ ಹಿಡಿದುಕೊಂಡು ಹೋಗಿದ್ದನ್ನು ನೋಡಿದ್ದಳು.

ರೇವತಿಯ ಕೈ ನಡಗುತ್ತಿದೆ !

ದೇಹದ ತುಂಬಾ ಬೆವರು !

ಕಲ್ಲಿನ ಕಟ್ಟಡದ ನೆಲ ಮಾಳಿಗೆಯಲ್ಲಿ ಗಾಳಿ, ಬೆಳಕು ಬರುತ್ತಿರಲಿಲ್ಲ. ಉಸಿರು ಕಟ್ಟಿದಂತೆ ಆಗುತ್ತಿದೆ.

ರೇವತಿ ಡಬ್ಬಿಯ ಮುಚ್ಚಳ ತೆರೆದಳು !

ತೇಯ್ದು ಉಂಡೆ ಮಾಡಿರುವ ಶ್ರೀಗುಂಧ !

ಅದೇ...ಅದೇ ಪರಿಮಳ !

ರೇವತಿಗೆ ಗೊತ್ತಾಗಿ ಹೋಯಿತು. ಭಯ, ಗಾಬರಿಯಿಂದ ಡಬ್ಬಿಯ ಮುಚ್ಚಲವನ್ನು ಬಿಗಿಯಾಗಿ ಮುಚ್ಚಿದಳು.

ಹೆದರುತ್ತಾ ಸುತ್ತಲೂ ನೋಡಿದಳು ಹಾವುಗಳು ಬಂದಿರಲಿಲ್ಲ !

ಇಷ್ಟು ಬೇಗ ಬರಲು ಸಾಧ್ಯವೆ?

ಕೈಯಲ್ಲಿ ಹಿಡಿದು ಕೊಂಡಿದ್ದ ಸೊಡರಿನ ಬೆಳಕಿನಲ್ಲಿ ಕಲ್ಲಿನ ಗೋಡೆಯ ಮೇಲೆ ಅಂಟಿಸಿದ್ದ ಫೋಟೋಗಳನ್ನು ಕಂಡು ಹತ್ತಿರ ಬಾಗಿ ನೋಡಿದಳು !

ಎಡತೊರೆ ಸಂಸಾರದ ಫೋಟೊ !

ಅರುಂಧತಿ, ಅವಳ ಗಂಡ, ಲಿಂಗಯ್ಯ, ವೀರಭದ್ರ ಮತ್ತು ಕೊನೆಯಲ್ಲಿ ಪ್ರಸನ್ನ !

ಪ್ರತಿಯೊಬ್ಬರ ಫೋಟೊಗಳ ಮೇಲೆ x ಗುರುತನ್ನು ಕೆಂಪು ಬಣ್ಣದಿಂದ ಹಾಕಲಾಗಿತ್ತು !

ಉಳಿದವರೆಲ್ಲಾ ಸತ್ತಿದ್ದಾರೆ. ಈಗ ಪ್ರಸನ್ನನನ್ನು ಸಾಯಿಸಲು ಪೂಜಾರಿ ಹೋಗಿದ್ದಾನೆ !

ರೇವತಿ ಈಗ ಭಯ, ಗಾಬರಿ, ಆತುರದಿಂದ ಗರ್ಭಗುಡಿಯಿಂದ ಹೊರ ಬಂದಳು.

ದೇಹವೆಲ್ಲಾ ಬೆವರಿನಿಂದ ತೊಯ್ದು ಹೋಗಿದೆ. ಗಡಗಡನೆ ನಡುಗುತ್ತಿದ್ದಾಳೆ.

ರೇವತಿ ಮನೆಯ ಹತ್ತಿರ ಬಂದು "ಶ್ರೀಕಂಠ... ಶ್ರೀಕಂಠ" ಎಂದು ಜೋರಾಗಿ ಕೂಗಿಕೊಂಡಳು.

ಶ್ರೀಕಂಠ ಗಾಬರಿಯಿಂದ ಓಡಿ ಬಂದನು.

ರೇವತಿ ಅವನ ಕೈ ಹಿಡಿದುಕೊಂಡು ಬೇಗ, ಬೇಗ ನಡೆಯುತ್ತಾ "ನಾವು ಈಗಲೇ ಪ್ರಸನ್ನನ ಬಂಗಲೆಗೆ ಹೋಗಬೇಕು".

ಶ್ರೀಕಂಠ ಕೋಪದಿಂದ "ಯಾಕೆ?"

"ಹೇಳುತ್ತೇನೆ ಬಾ"

ಇಬ್ಬರೂ ಓಡುತ್ತಿದ್ದಾರೆ

* * *

ಎಡತೊರೆಯ ಬಂಗಲೆಯಲ್ಲಿ ! ಗೇಟಿನ ಹತ್ತಿರ ನಿಂತಿದ್ದ ಪೀಸಿಯನ್ನು ಅದೇ ತಾನೇ ಅಲ್ಲಿಗೆ ಬಂದ ರೇವತಿ, ಶ್ರೀಕಂಠ ಕೇಳಿದರು.

20ನೇ ಪುಟಕ್ಕೆ

ಇಲ್ಲಿಯವರೆಗೆ.........

ವೀರಭದ್ರ ಹಾವುಗಳಿಗೆ ಬಲಿಯಾಗಿ ಸಾಯುತ್ತಾನೆ. ಶ್ರೀಕಂಠನ ಒತ್ತಾಯದ ಮೇರೆಗೆ ರೇವತಿ ಪುನಹ ಅವನ ಮನೆಯಲ್ಲೇ ಉಳಿದುಕೊಳ್ಳುತ್ತಾಳೆ. ಪೂಜಾರಿಯ ಜೊತೆ ಮಾತಾಡಬೇಕೆಂದು ದೇವಸ್ಥಾನಕ್ಕೆ ಬರುತ್ತಾಳೆ. ಅಲ್ಲಿ ನಿಗೂಢತೆ ಅನಾವರಣ ಗೊಳ್ಳುತ್ತದೆ. ಗರ್ಭಗುಡಿ ಪ್ರವೇಶಿಸುತ್ತಾಳೆ.

ಮುಂದೆ ಓದಿ.........

# ಕೊಡಗು ಗೌಡ ವಿದ್ಯಾಸಂಘ (ರಿ.) ಮಡಿಕೇರಿ ಇವರ ವತಿಯಿಂದ ಅರೆಭಾಷಿಕರ ಹತ್ತುಕುಟುಂಬ ಹದಿನೆಂಟು ಗೋತ್ರದ ಗೌಡ ವಿದ್ಯಾರ್ಥಿ ಪ್ರತಿಭೆಗಳಿಗೆ ಪುರಸ್ಕಾರ.

ದಿನಾಂಕ 17-9-2000ದ ಭಾನುವಾರ ದಿವಸ ಮಡಿಕೇರಿಯ ವಿದ್ಯಾಸಂಘದ ಆವರಣದಲ್ಲಿ ವರ್ಣರಂಜಿತ ಸರಳ ಸಮಾರಂಭವು ಹತ್ತು ಕುಟುಂಬ ಹದಿನೆಂಟು ಗೋತ್ರಕ್ಕೆ ಸೇರಿದ ಗೌಡ ಪ್ರತಿಭೆಗಳಿಗೆ ಈ ಹಿಂದೆ ಪ್ರತಿವರ್ಷವೂ ನೀಡಿದಂತೆ ಈ ವರ್ಷವೂ ಸಂಘದ ಅಧ್ಯಕ್ಷರಾದ ಶ್ರೀ ಕುಯ್ಯಮುಡಿ ಪೂರ್ಣಯ್ಯನವರ ಅಧ್ಯಕ್ಷತೆಯಲ್ಲಿ ನಡೆಯಿತು. ಸಭೆಯಲ್ಲಿ ದಾನಿಗಳು ಮತ್ತು ಪ್ರತಿಭಾವಂತರ ಪೋಷಕರು, ಪ್ರತಿಭಾ ವಿದ್ಯಾರ್ಥಿಗಳು, ವಿದ್ಯಾ ಸಂಘದ ನಿರ್ದೇಶಕರು, ಮಹಿಳಾ ಒಕ್ಕೂಟದ ಅಧ್ಯಕ್ಷೆ ಮತ್ತು ನಿರ್ದೇಶಕರು, ಅಕಾಡೆಮಿ ನಿರ್ದೇಶಕರು ಹಾಗೂ ಸುಮಾರು 150ಕ್ಕೂ ಹೆಚ್ಚು ಗೌಡ ಅಭಿಮಾನಿ ಬಾಂದವರು ನೆರೆದಿದ್ದರು. ಮುಖ್ಯ ಅತಿಥಿಗಳಾಗಿ ಜನಾಂಗದ ಹಿರಿಯರಾದವರು, ಕುಶಾಲ ನಗರದ ಗೌಡ ಸಮಾಜದ ಮಾಜಿ ಅಧ್ಯಕ್ಷರು, ನಿವೃತ್ತ ಪೋಲಿಸ್ ಡಿ.ವೈ. ಎಸ್.ಪಿ. ಆಗಿರುವ ಶ್ರೀ ಕೊಂಪುಳಿರ ಸೋಮಪ್ಪನವರು ಆಗಮಿಸಿದ್ದರು. ದಾನಿಗಳಲ್ಲಿ ಅತಿಥಿಗಳಾಗಿ ವಿದ್ಯಾ ಸಂಘದ ಮಾಜಿ ನಿದೇಶಕರು, ಕಾಪಿ ಪ್ಲಾಂಟರ್ ಆದ ಶ್ರೀ ಕೋರನ ಎ. ವಿಶ್ವನಾಥ್ ನವರು ಆಗಮಿಸಿದ್ದರು. ಸಭೆಯ ಅಧ್ಯಕ್ಷತೆಯನ್ನು ಕುಯ್ಯಮುಡಿ ಪೂರ್ಣಯ್ಯನವರು ವಹಿಸಿದ್ದರು.

ಪ್ರತಿಭಾ ಕಾರ್ಯಕ್ರಮವು ಪ್ರಾರ್ಥನೆಯೊಂದಿಗೆ ಪ್ರಾರಂಭ ವಾಯ್ತು. ಮಾಡಿದರು. ಸೇರಿದ ಸರ್ವರನ್ನು ಮತ್ತು ಅತಿಥಿಗಳ ಪರಿಚಯವನ್ನು ಸಂಘದ ಪ್ರಧಾನ ಕಾರ್ಯದರ್ಶಿ ಕೋಳು ಮುಡಿಯನ ಅನಂತ್ ಕುಮಾರ್ ನೀಡಿದರು. ನಿರ್ದೇಶಕರಾದ ಸೂರ್ತಲೆ ಸೋಮಣ್ಣನವರು ದಾನಿಗಳ ವಿವರಗಳಲ್ಲದೆ ವೇತನ ನಿಧಿ ಸ್ಥಾಪಿಸಿದ ಬಗ್ಗೆ, ನಿಧಿ ನಡೆದು ಬಂದ ದಾರಿ, ಸುಮಾರು 200ಕ್ಕೂ ಮಿಕ್ಕಿ ದಾನ ನೀಡಿದವರ ಪಟ್ಟಿಯನ್ನು ಓದಿ ತಿಳಿಸಿದರು. ಸಭೆಯಲ್ಲಿ ಅತಿಥಿಗಳಿಂದ ಪ್ರತಿಭಾ ವಿದ್ಯಾರ್ಥಿಗಳಿಗೆ ಬಹುಮಾನದ ಜೊತೆಗೆ ಧೃಢೀಕರಣ ಪತ್ರವನ್ನು ಮುಖ್ಯ ಅತಿಥಿಗಳಿಂದ ನೀಡಲಾಯಿತು. ಬಹುಮಾನವು 7ನೇ ತರಗತಿ, 10ನೇತರಗತಿ, ಪದವಿ ಪೂರ್ವ ಮತ್ತು ಪದವಿ ವಿದ್ಯಾರ್ಥಿಗಳಿಗೆ 5 ಪುರಸ್ಕಾರಗಳಂತೆ ನೀಡಲಾಯಿತು. ನೆರೆದ ದಾನಿಗಳಿಂದ ವಿದ್ಯಾರ್ಥಿನಿಧಿಯ ಭವಿಷ್ಯದ ಬಗ್ಗೆ ಚರ್ಚೆ, ಕಿರುಭಾಷಣ ಅಭಿಪ್ರಾಯಗಳು ಬಂದವು.

ಹಿರಿಯರು ತೀರಿಕೊಂಡಾಗ ಅವರ ಹೆಸರಿನಲ್ಲಿ ನಿಧಿಯನ್ನು ನೀಡುವುದು ಸೂಕ್ತವೆಂದು, ಪ್ರತಿ ಕುಟುಂಬದವರು ಒಂದು ಸಾವಿರ ರೂಪಾಯಿ ನೀಡಿ ಸಹಕರಿಸುವಂತೆಯೂ ಹಾಗೂ ವ್ಯಕ್ತಿ ಮರಣ ಪಟ್ಟಾಗ ಸಿಕ್ಕುವ ಹಣದ ಮೊತ್ತವನ್ನು ವಿದ್ಯಾ ಸಂಘಕ್ಕೆ ನೀಡಿ ಪ್ರೋತ್ಸಾಹಿಸುವಂತೆಯೂ ಕೋರನ ವಿಶ್ವನಾಥನವರು ತಿಳಿಸಿದರು.

ಅಧ್ಯಕ್ಷರು ಮಾತನಾಡುತ್ತಾ ನಿಧಿ ಸಂಗ್ರಹಣಾ ಕಾರ್ಯವು ಇನ್ನೂರಕ್ಕಿಂತಲೂ ಹೆಚ್ಚು ದಾನಿಗಳಿಂದ ರೂ 2ಲಕ್ಷಕ್ಕಿಂತಲೂ ಹೆಚ್ಚು ಸಂಗ್ರಹವಾಗಿದ್ದು ಏನೇನೂ ಸಾಲದು. ಈ ಗುರಿಯು 10 ಲಕ್ಷವನ್ನು ಮೀರಬೇಕು, ಪೇಟೆ ಮಕ್ಕಳು ಮಾತ್ರ ಹೆಚ್ಚಿನ ಸಂಖ್ಯೆಯಲ್ಲಿ ಪ್ರತಿಭೆಗಳಾಗಿ ಹೊರಹೊಮ್ಮುತ್ತಿದ್ದು ಹಳ್ಳಿ ಮಕ್ಕಳು ಬಹಳ ಕಮ್ಮಿಯಾಗಿ ಹೊರ ಹೊಮ್ಮುತ್ತಿರುವುದು ವಿಷಾಧನೀಯ ಎಂದರು. ಹಳ್ಳಿ ಮಕ್ಕಳು ಜೀವನದ ಗುರಿಯನ್ನು ಮುಟ್ಟಲು ಎಡುವುದಲ್ಲದೆ ಪೋಷಕರು ಸಹ ತುಂಬಾ ಸಹಕರಿಸಬೇಕೆಂದು ಹೇಳಿದರು. I.A.S., I.P.S., I.F.S. ನಮ್ಮಲ್ಲಿ ಯಾರು ಆಗದಿರುವ ಕೊರಗನ್ನು ತಿಳಿಸಿದರು. ಬೆಂಗಳೂರಿನಲ್ಲಿ ಸ್ಥಾಪನೆಯಾದ ಕೃಷಿ ಸಮಾಜದ ಪ್ರಯೋಜನವನ್ನು ಪಡೆಯುವಂತೆ ಕೋರಿದರು. ಅಲ್ಲದೆ ಮುಂದೆ ವಿದ್ಯಾರ್ಥಿಗಳು ಗುರಿ ಮುಟ್ಟಲು ಆರ್ಥಿಕ ತೊಂದರೆಯಿಂದ ವಿಫಲವಾದಲ್ಲಿ ಅಂತವರಿಗೆ ವಿದ್ಯಾ ಸಂಘವು ಖಂಡಿತ ಸಹಕರಿಸುತ್ತದೆಯೆಂದು ತಿಳಿಸಿದರು. ಜನಾಂಗದಲ್ಲಿ ವಿಶಾಲ ಭಾವನೆಯ ಜನಾಂದೋಲನ ಆಗಬೇಕೆಂದು ಒತ್ತಿ ಹೇಳಿದರು.

ಸಭೆಯಲ್ಲಿ ಕೊಂಪುಳೀರ ಸೋಮಪ್ಪನವರು ತಮ್ಮ ಪತ್ನಿ ಜಯಲಕ್ಷ್ಮಿಯವರ ಹೆಸರಿನಲ್ಲಿ ರೂ 5,000ವನ್ನು, ಪಟ್ಟಡ ಜಯರಾಮ್ ತಮ್ಮ ತಂದೆ ನಂಜುಂಡನವರ ಹೆಸರಿನಲ್ಲಿ ರೂ 1000ವನ್ನು, ಬಾಳೇಡಿ ಉತ್ತಯ್ಯನವರು ತಮ್ಮ ತಂದೆ ಚಿಣ್ಣಪ್ಪನವರ ಹೆಸರಿನಲ್ಲಿ ರೂ. 1000ವನ್ನು, ಪಟ್ಟೆಮನೆ ಶೇಷಪ್ಪನವರು ತಮ್ಮ ತಂದೆ ಕೃಷ್ಣಪ್ಪನವರ ಹೆಸರಿನಲ್ಲಿ ರೂ 2000ವನ್ನು ನೀಡುವಂತೆ ವಾಗ್ದಾನ ನೀಡಿರುವುದಲ್ಲದೆ ಅವರಿಗೆ ಅವರ ಕುಟುಂಬಕ್ಕೂ ತಾಯಿ ಶೃಂಗೇರಿ ಕೃಪೆ ಸದಾ ಇರುವುದು ಎಂಬುದಾಗಿ ಈ ಸಮಯದಲ್ಲಿ ವಿದ್ಯಾಸಂಘವು ಶುಭ ಹಾರೈಸುತ್ತದೆ. ಕೋಳುಮುಡಿಯನ ಅನಂತ್ ಕುಮಾರ್‌ರವರು ಉತ್ತಮ ಮಟ್ಟದ ನಿರೂಪಣೆ ನೀಡಿ ಮನಸೂರೆಗೊಂಡರೆ ಅಷ್ಟೇ ಪ್ರಬಲವಾಗಿ ಸಂಘದ ಉಪಾಧ್ಯಕ್ಷರಾಧ ಪಂಜಿಪಳ್ಳ ವೆಂಕಪ್ಪನವರು ವಂದಿಸಿರುವುದು ನಿಜಕ್ಕೂ ಶ್ಲಾಘನೀಯವಾಗಿ ಮನಸ್ಸಿಗೆ ಮುದನೀಡಿತು.

ವರದಿ : ಪಟ್ಟಡ ಪ್ರಭಾಕರ

ವಿದ್ಯಾರ್ಥಿಗಳ ಪಟ್ಟಿಯನ್ನು ಮುಂದಿನ ಸಂಚಿಕೆಯಲ್ಲಿ ನೀಡಲಾಗುವುದು.

---

## ಪತ್ರ ವಿಭಾಗ :



ಮಾನ್ಯರೆ,

ಕೊಡಗು ಸಂಗಾತಿ ನಿಮ್ಮದಲ್ಲ ನಮ್ಮದು. ಕನ್ನಡ ಮತ್ತು ನಮ್ಮ ಅರೆಭಾಷೆ ವಿಭಾಗ ಚೆನ್ನಾಗಿ ಬರುತ್ತಿದೆ. ಹಿರಿಯರ ಪರಿಚಯ, ಸರ್ಪಗಂಧ, ರಾಜು ಮಂಜ್ಞನ ಕಥೆ ಹಾಗೂ ಇನ್ನು ಹಲವು ಲೇಖನಗಳು, ಭವಿಷ್ಯ ಎಲ್ಲವು ನನಗೆ ಇಷ್ಟವಾಗಿವೆ. ಈ ನನ್ನ ಸಂಗಾತಿ ನೂರ್ಕಾಲ ಚಿರಂಜೀವಿಯಾಗಿ ಬಾಳಲಿ ಎಂದು ಈ ರಕ್ಷಬಂಧನ ಹಬ್ಬದಂದು ಶುಭ ಕೋರುತ್ತೇನೆ.

ನಿಡ್ಯಮಲೆ ಪದ್ಮನಾಭಗೌಡ, ಪೆರಾಜೆ ಗ್ರಾಮ

## ಭೂತ ಬುಟ್ಟೊತ್

ಕನಕ ಅಂಬೆಕಲ್, ಚೆಟ್ಟಳ್ಳಿ

ಅಕ್ಕುನ ಆರ್ಭಟೆ ಮುಗಿಲ್ ಮುಟ್ಟುವಾಂಗಿತ್. ಅವಳ ಉದ್ದ ಕುದೋಲ್ನ ತನ್ನ ಒರ್‌ಟ್ ಕೈಗೆ ಸುತ್ತಿಕಂಡ್ ಅವಳ್ನ ಮೇಲೆತ್ತಿ ಅದೇ ರಭಸಂದ ಕುಕ್ಕುತೀತ್ ತಿಮ್ಮಜ್ಜ ಬೇನೆ ತಡಿಯಾಕಾಗದೆ ಬೊಬ್ಬೆ ಹೋಡೀತಿತ್ ಅಕ್ಕು. ಇನ್ನ್ ಬಂದಿಯಾ, ಈ ಕೂಸುಗೆ ಹೀಂಗೆ ಹಿಂಸೆ ಕೊಟ್ಟಿಯಾಂತೇಳಿ ಮೇಲೆಂದ ಮೇಲೆ ಎತ್ತಿ ಎತ್ತಿ ಕುಕ್ಕುತ್ತೀತ್ ಇಲ್ಲೆ ಬಾದುಲ್ಲೆ, ನಾ ಹೊರ್‌ಟ್ ಹೋನೆ, ಬುಟ್ಟು ಬುಡಿ ನನ್ನಂತೇಳಿ ಬೇಡ್‌ಂಬತ್ತೀತ್ ಅಕ್ಕು ಗೂಡೆಗೆ ಹಿಡ್ದ ಭೂತ. ಕುದೋಲ್ನ ಬುಟ್ಟ್ ಹತ್ರಲೇ ಇದ್ದ ವಯ್ಲುನ ಸುಡಿ ತಕಂಡ್ ರಪ ರಪಾಂತ ಬಾರ್ಸಿ ಇನ್ನ್ ಮುಂದೆ ಈ ದೆಯ್ಯ ಬಂದರೆ ಕೇಳಿಂತೇಳಿ ಗೆದ್ದ ನೆಗೆ ನೆಗಾಡ್ತ್ ತಿಮ್ಮಜ್ಜ. ಹ್ಯಾಪ್ ಮೋರೆ ಮಾಡಿ ನಿತ್ತಿದ್ದ ಅಪ್ಪ ಹಾಂಗೂ ಸಣಾವ ನಿಶ್ಚಿಂತೆನ ಉಸಿರ್ ಬುಟ್ಟೊ. ನೆರೆಕರೆಂದ ಬಂದ ಜನಗ ತಮ್ಮ್ ತಮ್ಮಲ್ಲೆ ಮಾತಾಡ್‌ಕಂಡ್ ಹಿಂದೆ ಸರ್ದೊ.

ಬೇನೆಂದ, ಆಯಾಸಂದ, ಅವಮಾನಂದ ಕಂಗಾಲ್ ಆದ ಅಕ್ಕು ನಿಜವಾಗಿ ಸೊಯ ತಪ್ಪಿ ಬಿದ್ದಿತ್ತ್. ತಿಮ್ಮಜ್ಜ ಚೊಂಬುಲಿ ನೀರ್ ತರ್‌ಸಿ ತಲೆಗೆ ತಟ್ಟಿತ್. ಮೋರೆಗೆ ಚಿಮ್‌ಕಿಸಿತ್, ನಿಧಾನಲಿ ಕಣ್ ಬುಟ್‌ತ್. ಅಕ್ಕು. ತಿಮ್ಮಜ್ಜ ಮಗಾ... ಮಗಾ.. ಏಳ್‌ವ್ವ ನೋಡು ನಾನ್ ಬಂದೊಳೆಂತೇಳಿ ಎಚ್ಚ್‌ರ್ಸಿತ್. ಕಣ್ ತೆರ್‌ದ ಅಕ್ಕು ಈ ಅಜ್ಜನ ಕಂಡ್ ಹೆದ್‌ರಿ ಕಿರ್‌ಚಿಕಂಡತ್.

ಅವ್ವನ ಕಳ್‌ಕಂಡ ತಬ್‌ಲಿ ಕೂಸ್ ತನ್ನ ಅಜ್ಜಿನ ಪ್ರೀತಿಲೆ ಬೆಳ್ತ್. ಅಪ್ಪಂತೇಳಂವ ಮತ್ತೆ ಮದುವೆ ಮಾಡ್‌ಕಂಡ್ ಸಂತೋಸ್‌ಲೇ ಇತ್ತ್. ಸುರುನ ಹೆಣ್ಣ್‌ನ ಪ್ರೇಮದ ಕುಡಿ ಆಗಿ ಒಳ್ದ ಈ ಕೂಸ್ ಮುಳ್ಳಾಗಿ ಕಾಣ್ಸಿಕಂಡ್‌ತ್. ಸಣಾವನ ಕೈಯಿಂದ ಸಣ್ಣ ಪುಟ್ಟ ತಪ್ಪ್‌ಗಳಿಗೆಲ್ಲಾ ಹೊಡ್ತ ಒತ್ತ ಬೀಳ್‌ತ್ತಿತ್. ಹರ್‌ಕ್ ಬಟ್ಟೆ, ಹಸ್ದ ಹೊಟ್ಟೆ. ನಿತ್ಯ ನರ್‌ಕ ಈ ಕೂಸ್‌ಗೆ. ಆದ್ರೂನೂ ತನ್ನ ಪಾಲ್‌ದನ್ನೆಲ್ಲಾ ಅಡ್‌ಗ್‌ಸಿ, ಉಣ್ಸಿ ತಿನ್ನಸಿ ಸಾಕಿತ್ ಅಜ್ಜಿ. ಸಾಲ್ದಂತ ಸಾಲ್ ಸಾಲ್ ತಂಗೆ, ತಮ್ಮಂದ್‌ರ್ ಹುಟ್ಟಿಕಂಡೋ. ಈಗ ಪೂರಾ ಮರ್ತೇ ಬುಟ್‌ತ್ ಅಪ್ಪಂತೇಳ್ಸಿಕಂಡ್ ಪ್ರಾಣಿ.

ಅರೆ ಹೊಟ್ಟೇಲೂ ಮೈತುಂಬಿಕಂಡ್ ಬೇಳ್ತ್ ಅಕ್ಕು. ಹದ್ನಾಲ್ಕ್ ಒರ್ಸದ ಗೂಡೆ ಆತ್. ಉದ್ದಕ್ಕೆ ಬೆಳ್ದ ಕುದೋಲು, ಹೊಳ್ಪ ಕೆನ್ನೆಗ, ಅಗಲ ಕಣ್‌ಗ ನೋಡೋರ ಕಣ್ಣ್‌ಗೆ ಹಬ್ಬ ಆತ್. ಒಂದು ದಿನ ಗೂಡೆ ದೊಡ್ಡದಾತ್‌ತೇಂಳಿ ಅಜ್ಜಿ ಡಂಗ್‌ರ ಸಾರ್ತ್. ಇದ್ದ ಬದ್ದ ಸ್ವಾತಂತ್ರನೂ ಹೊರ್‍ವೋತ್. ನದಿ, ಹಳ್ಳ ಕೊಳ್ಳ ತಿರುಗುವಾಂಗಿಲ್ಲೆ. ಕಾಡ್ ಮೇಡ್ ಅಲಿವಾಂಗಿಲ್ಲೆ. ದೋಸ್ತಿಗಳೊಟ್ಟಿಗೆ ಸೇರಿ ಕಂಡ್ ಲಗೋರಿ, ಕುಂಟಬಿಲ್ಲೆ ಆಡುವಾಂಗಿಲ್ಲೆ. ಅಜ್ಜಿಂದ ಹಸೆ, ಹಾಡ್, ಸೋಬಾನೇ ಕಲಿದು, ಬಾಗ್ಲ ಮುಂದೆ ರಂಗೋಲೆ ಬುಡ್ಸುದು, ಅಡಿಗೆ, ಪಡಿಗೆ ಕಲಿದೇ ಆತ್. ಹರ್‌ಕ್‌ಲ ಲಂಗದ ಮೇಲೆ ಒಂದ್ ದಾವಣಿ ಬಾತ್. ಅಜ್ಜಿಗೆ ಒಂದೇ ಆಸೆ, ಈ ರಕ್ಕಸಿ ಚಿಕ್ಕಮ್ಮಂದ ಬುಡ್ಸಿ ಯಾವನಾದರೊಬ್ಬ ಪುಣ್ಯಾತ್ಮ ಕೈ ಹಿಡ್ದರೆ ಸಾಕ್‌ತ. ಆದರೆ ಅಜ್ಜಿನ ಆಸೆ ಆಸೆ ಆಗೇ ಒಳ್ತ್. ಇದ್ದಕ್ಕಿದ್ದಂಗೆ ಅಜ್ಜಿ ಪಿಳ್ಳಿನ ಕೈ ಬುಟ್ಟ್ ಕೈಲಾಸ ಸೇರಿ ಕಂಡ್‌ತ್.

ಈಗ ಅಕ್ಕು ಪೂರಾ ದಿಕ್ಕಿಲ್ಲದಂಗಾತ್. ಕತ್ತೆನಾಂಗೆ ದುಡ್‌ದ್ ಅರೆ ಹೊಟ್ಟೇಲಿ ಕಾಲ ತಳ್ಳುದೇ ಕಷ್ಟ ಆತ್. ಆ ಪುಟ್ಟ ತಲೆ ಗೇನ ಮಾಡ್ತ್. ಅಜ್ಜಿನ ದೆವ್ವ ಹಿಡ್ದಾಂಗೆ ನಾಟಕ ಆಡ್ರೆ ಹೆಂಗೆ? ತಿಂಬಕೆ ಅದ್ ಬೇಕ್, ಇದ್ ಬೇಕ್‌ತ್ತೇಳಿ ಕೇಳಿರೆ ಕೊಟ್ಟೇ ಕೊಟ್ಟವೆ, ನೋಡೊನೊಂತ ದೆವ್ವದ ಪಾರ್ಟ್ ಮಾಡಿಕ್ಕೆ ರೆಡಿ ಆತ್. ಮಧ್ಯಾಹ್ನದ ಉರಿ ಬಿಸ್ಲ್‌ಲಿ ಗದ್ದೆಲಿ ಕೆಲ್ಸ ಮಾಡಿ ತತ್‌ರ್ಸಿಕಂಡ್ ಬಾಕನ ಅರೆ ಹೊಟ್ಟೆ ತುಂಬುವ ತಂಗ್ಳನ್ನ ಎದ್‌ರಾತ್. ಇದರ ತಿಂದಾಕನ ಹೊಟ್ಟೆಸುದು ಕಮ್ಮಿ ಆವ ಬದ್‌ಲ್ ಹೆಚ್ಚಾತ್. ಚಿಕ್ಕಮ್ಮ ನೋಡ್ತಿದ್ದಾಂಗೇ ಕೈ ಕಾಲ್ ನಡ್ಗಿಕೆ ಸುರಾತ್ ಕಣ್ ತಿರ್ಗಿ ಕಂಡ್ ಬಾತ್. ಬಾಯ್‌ಂದ ಹೂಂಕಾರ ಹೊರ್ಬತ್ ಹೆದ್ರಿ ಕಂಗಾಲ್ ಆದ ಚಿಕ್ಕಮ್ಮ ಗಂಡನ ಕರ್ತ್. ಅಪ್ಪನ ಕಂಡ ಕೂಡ್ಲೇ ಮಂಜಾ ನಾನ್ ನಿನ್ನವ್ವ ನರ್‌ಕಲಿ ಒಳೆ, ಹೊಟ್ಟೆಗಿಲ್ಲೇ ಹೊಟ್ಟೆ ಹಸ್ತದೇ ಬೇಗ ಏನಾರ್ ತಿಂಬಕೆ ಕೊಡು ಮಂಜ್ನಾತ ಬೊಬ್ಬೆ ಹಾಕಿತ್. ಹೆಣ್ಣ್‌ನ ಕಡೆಗೊಮ್ಮೆ ನೋಡ್ದ ಮಂಜ ಒಳಗೆ ಹೋಗಿ ಅನ್ನ ಮೊಸ್ರು ಕಲ್ಸಿ, ತನ್ನ ಕೈಲೇ ಅವ್ವಂಗೆ ತಿನ್ಸಿ ನೀರ್ ಕುಡ್ಸಿತ್. ಮಂಜಾ ಸುಕಲಿರ್. ನನ್ನ ಮರ್ತ್ ಬುಡ್‌ಬಡಾಂತೇಳ್ತಿದ್ದಂಗೆ ಕೈ ದೊಪ್ಪಂತ ಕೆಳಗೆ ಬೀತ್. ಕಣ್ ಮುಚ್ಚಿ ಮಲ್ಗಿದ ಅಕ್ಕು ಗಡದ್ದಾಗಿ ಒಂದು ನಿದ್ದೆ ತೆಗ್ದ್ ಎದ್ದ್ ಕುದ್ದತ್. ಅಂದ್‌ಂದ ಅಕ್ಕುಗೆ ಹಂಞ ರಿಯಾಯ್ತಿ ಸಿಕ್ತ್. ಹೊಡ್ತ ಒತ್ತಗಳ ರಭಸ ಕಮ್ಮಿ ಆತ್. ಹೊಟ್ಟೆ ತುಂಬಾ ಉಂಬಾಂಗಾತ್. ಅಜ್ಜಿನ ದೆವ್ವ ಮತ್ತೆ ಹಬ್ಬ ಹರಿದಿನಗಳ್‌ಲಿ ಮಾತ್ರ ಬಾಕೇ ಸುರಾತ್.

ಈಗ ಅಕ್ಕು ಸಣ್ಣ ಗೂಡೆ ಅಲ್ಲ. ಹದ್ನೆಂಟ್ ಒರ್ಸದ ಯೌವನಗಾರ್ತಿ. ಅವಳ ಅಂಗಾಂಗಗ ಈಗ ಇನ್ನೂ ತುಂಬಿಕಂಡ್ ಕಂಡದೆ. ಕುದೋಲು ಇನ್ನು ಉದ್ದ ಬೆಳ್ದ್‌ಟ್ಟು. ಕೆನ್ನೆನ ಕೆಂಪು ಬಾಲ ಸೂರ್ಯನ ನೆನ್ಪುಗೆ ತಂದದೆ. ಈಗ ಒಂದೇ ದೋಸ. ಗೂಡೆಗೆ ದೆವ್ವ ಹಿಡ್ದದೆ. ಬಂದ ನೆಂಟಸ್ತಿಕೆಗೆಲ್ಲಾ ಬಂದ ದಾರಿಗೆ ಸುಂಕ ಇಲ್ಲೆತ ಕಾಲ್ ಕೀಳ್ತ ಒಳೊ. ಹೆಂಗಾದ್ರೂ ಮಾಡಿ ಮಗಳಿಗೆ ಹಿಡಿವ ದೆವ್ವಂದ ಮುಕ್ತಿ ಕಾಣ್ಸದಿದ್ದರೆ ಆಕಿಲೆ. ಜೀವ ಮಾನ ಇಡೀ ಈ ದೆವ್ವದೊಟ್ಟಿಗೆ ವದ್ದಾಡ್ತಕಾದ್. ಅದ್ಕಾಗಿ ಒಬ್ಬ ಒಳ್ಳೆ ಮಂತ್ರಗಾರನ ಹುಡ್ಕಾಟ ಸುರಾತ್. ಹೊಗೆ ಹಾಕುದು, ಕಾಸಿದ ಬರೆಕೋಲ್‌ಲಿ ಬರೆ ಎಳಿದು, ಬರೆಬಾವಾಂಗೆ ಬಾರ್ಸುದು. ಇದೆಲ್ಲ ದೆವ್ವ ಬುಡ್ಸುವ ರೀತಿಗ.

ವಿಷಯ ದೂರಲಿರುವ ಸೋದರ ಮಾವಂಗೆ ನಿದಾನ್ಲಿ ತಲ್ಪಿತ್. ಒಬ್ಬನೆ ಮಂಜಾ ನಾಗನ ಒಟ್ಟಿಗೆ ಕರ್‌ಕಂಡ್ ಸೊಸೆನ ಕಾಂಬಕೆಂತ ಓಡೋಡಿ ಬಾತ್. ಅಪ್‌ರೂಪಕ್ಕೆ ಬಂದ ಹಳೇ ಬಾವಂಗೆ ಗಮ್ಮತ್ ಅಡ್ಗೆ ಸುರಾತ್. ಅಡ್ಗೆ ಪೊರ್ಮಳ ಗಾಳಿ ತೇಲಿ ಬಂದ್ ಅಕ್ಕುನ ಮೂಗುಗೆ ಬಡ್ತ್. ಒಂದ್ ಗಳ್ಗೆಲಿ ಅಜ್ಜಿನ ದೆವ್ವ ದೆವ್ವ ಬಂದೇ ಬುಡ್ತ್. ಯಥಾ ಪ್ರಕಾರ್‌ಲಿ ಮಾತ್ರ್ ಪ್ರೇಮದ ಪುತ್ರ ಅವ್ವನ ಬಾಯಿಗೆ ಊಟ ಉಣ್ಸಿತ್. ಇದ್ದ ಮಗಳ್ನ ಸಾಕಿಕೆ ಬೊತ್ತದಂವ ಸತ್ತ ಅವ್ವಂಗೆ ಸೋರ್ಗದ ಬಾಗ್ಲನ ತೆರ್ಸಿಕೆ ಒದ್ದಾಡ್ತ್.

ಈ ಸರ್ತಿ ಮೊಂತ್ರಗಾರ ಕಾದ ಸಲಾಕೆಂದ ಬರೆ ಎಳ್ದ್ ಭೂತನ ಬೆದುರ್ಸುದೂಂತ ಇತ್ತ್. ಹೆದ್ರಿದ ಭೂತ ದೈನ್ಯಂದ ಸೋದರ ಮಾವನ ಕಡೆ ನೋಡ್ತ್. ಪಕ್ಕಲೇ ಕುದ್ದಿದ್ದ ಬಾವನ ನೋಡಿ ನಸು ನಾಚಿತ್ ಹೊಟ್ಟೆ ತುಂಬಾ ಉಂಡ ದೆವ್ವ ಮೆಲ್ಲಂಗೆ ನಿದ್ದೆಗೆ ಜಾರ್ತ್. ಕಾದ ಸಲಾಕೆ ತಣ್ಣಂಗಾತ್. ಎಚ್ಚತ್‌ಕಂಡ ಅಕ್ಕುನ ನಾಗ ಕದ್ದ್ ಕದ್ದ್ ನೋಡ್ತಿತ್. ಗಂಟ್ ಮೂಟೆ ಹೊತ್ತ್‌ಕಂಡ್ ಮಾಂತ್ರಿಕ ಆಗಲೇ ಪರಾರಿ ಆಗಿತ್ತ್. ಇನ್ನ್ ಸೊಲ್ಪೇ ಸಮಯ್‌ಲಿ ಸೋದರ ಮಾಂವನ ಮನೆ ತುಂಬಿ ಕಂಡತ್ ಅಕ್ಕು. ನರ್ಕಲಿದ್ದ ಅಜ್ಜಿ ಸೀದಾ ಸ್ವರ್ಗದ ಮೆಟ್ಲ್ ಏರ್ತ್.

ಅನ್ಯಾಯದಲ್ಲಿ ಸಂಪಾದಿಸಿದ್ದು ಅಪ್ಪನದಾದರೂ ಬೇಡ

# ವಾಂಟೆಡ್ ಮಿಸ್ಟರ್ ರಾಜು [ನಮ್ಮ ರಾಜು ಮಂಜನ ಕಥೆ]

ಲೇಖನ : ಶಂಕರನ ಬಸಪ್ಪ

ಧಾರಾವಾಹಿ -19

**ಹಿಂದೆ ನಡದದ್.......**

ಮೇದಪಜ್ಜಂಗೆ ಅವರ ಸೀಗೆಕಾಯಿ ವ್ಯಾಪಾರ ಮಾಡಿ ಕೊಟ್ಟ್ ಒಳ್ಳೆ ಕಮಿಷನ್ ಹಣ ಸಂಪಾದನೆ ಮಾಡ್ತ್. ಮಾರನೆ ದಿನ ರಿಸರ್ವ್‌ಬೇಂಕ್‌ಲಿ ಪ್ರಿಂಟ್ ಮಾಡ್ದ ನೂರರ ನೋಟುಗಳ ಕಂತೆಗ ವೇಸ್ಟ್ ಪೇಪರ್ ಜೊತೆಗೆ ಹೊರಗೆಲ್ಲಾ ಬಿಸಾಡಿ ಹೋಗುಟ್ಟುತ್ತೇಳ್ವ ವಿಚಾರನ ತಿಳ್ದ್ ಬಂದದರಂದ ಆ ಬ್ಯಾಂಕ್‌ನ ಒಮ್ಮ ನೋಡಿ ಬರುವ ಆಸೆ ಆಗಿ ಅಲ್ಲಿಗೆ ಹೋತ್. ಆದ್ರೆ ಅಲ್ಲಿ ಬ್ಯಾಂಕ್‌ನ ಒಳಗೆ ಹೋಗಿ ನೋಡಿಕಾಗದಿದ್ದರೂ. ಪಕ್ಕದ ಹೆಬ್ಬಾಳ್ ಎಸ್ಟೇಟ್‌ಲಿರುವ ಗಾರ್ಮೆಂಟ್ ಪ್ಯಾಕ್ಟರಿ ಅಲ್ಲಿನ ಸಾಹುಕಾರನ ಬಾರೀ ಅವ್ಯವಹಾರದ ವಿಚಾರನ ಆಕಸ್ಮಾತ್ತಾಗಿ ತಿಳ್ಕಂಡ್ ಬುಟ್ಟಿತ್. ಹಂಗಾಗಿ ಈಗ ರಾಜು ಆ ಪ್ಯಾಕ್ಟರಿಗೆ ಹೋಗಿ ಬರ್ವ ಗ್ಯಾನ ಮಾಡ್ತ್...

ಮುಂದಕೆ..........

ರಾತ್ರಿ ಎಲ್ಲಾ ಸ್ಕೆಚ್ ಹಾಕಂಡಿದ್ದ ರಾಜು ಇಂದ್ ಬೇಗ ಹಾಸಿಗೆಂದ ಮೇಲಕ್ಕೆ ಎದ್ದತ್. ಬ್ಯಾಗ ಬ್ಯಾಗ ತನ್ನ ಚಾಕರಿಗಳನೆಲ್ಲಾ ಮುಗ್ಸಿಕಂಡ್ ಒಳ್ಳೆ ನೀಟಾಗಿ ಡ್ರೆಸ್‌ಮಾಡಿ ಕಂಡತ್. ಪೋಲಿಸ್ ಸಬ್ ಇನ್‌ಸ್ಪೆಕ್ಟರ್‌ಗೆ ಇರುವಂತಹ ದಪ್ಪ ಬೆಲ್ಟ್, ಬ್ರೌನ್ ಶೂವ್, ಹಾಕಂಡ್ ಬಿಳೀಶರಟ್ ಮೇಲೆ ಕೆಂಪು ಟೈನ ಕಟ್ಟಿಕಂಡತ್, ಕಣ್ಣಿಗೆ ಕಪ್ಪ್ ಕನ್ನಡಕನ ಹಾಕಂಡ್ ಜೋಬೊಳಗೆ ಒಂದು ಪಿಸ್ತೂಲು ತರದ್ ಕಾಣುವಂಗೆ ಜೋಬುನ ದಪ್ಪಮಾಡಿ ಕಂಡತ್. ಆಗ ಗಂಟೆ 10½ ಆಗಿತ್ತು.

ನೆಟ್ಟಂಗೆ ಟ್ಯಾಕ್ಸಿ ಸ್ಟ್ಯಾಂಡ್‌ಗೆ ಹೋಗಿ ಅಲ್ಲಿಂದ ಒಂದ್ ಲಕ್ಷುರಿ ಎಂಬಾಸಿಡರ್ ಕಾರ್‌ನ ಹೈಯರ್ ಮಾಡಿಕಂಡತ್, ಅಲ್ಲಿಂದ ನೆಟ್ಟಂಗೆ ಹೆಬ್ಬಾಳ್ ಎಸ್ಟೇಟ್ ಬಾಂಬೆ ಡ್ರೆಸ್ ಮೇಕರ್ಸ್ ಗಾರ್ಮೆಂಟ್ಸ್ ಫ್ಯಾಕ್ಟರಿಗೆ ಹೊರಟತ್. ಅಲ್ಲಿಗೆ ಹೋದಂಗೆ ಇಂವನ ಕಾರ್‌ನ ಆ ಪ್ಯಾಕ್ಟರಿ ಮೇಯಿನ್ ಗೇಟ್‌ಗೆ ಅಡ್ಡ ಆಗಿ ಕಾರ್‌ನ ನಿಲ್ಸಿತ್. ಆಗ ಗೇಟ್ ಕೀಪರ್ ಸೆಕ್ಯುರಿಟಿ ಗಾಡ್ ಒಬ್ಬ ಓಡಿ ಬಂದ್ ಕಾರ್‌ನ ಸೈಡಿಗೆ ನಿಲ್ಸಿಕೆ ಹೇಳ್ತ್. ಅಂವಂಗೆ ಈ C.I.D. ಇನ್‌ಸ್ಪೆಕ್ಟರ್ "ಶ್ಶ್ ಸದ್ ಮಾಡ್‌ಬ್ಯಾಡತಾ ಸಂಜ್ಞೆ ಮಾಡಿ ಹೇಳಿ ಹೋಗಿ ನಿನ್ನ ಆಫೀಶರನ್ನ ಕರ್ರ್‍ಕಂಡ್ ಬಾತೇಳಿ ಆ ಕಾರ್‌ನ ಒಳಗಡೇನೇ ಕುದ್‌ಕಂಡ್ ಆರ್ಡರ್ ಮಾಡ್ತ್. ಆ ಗಾರ್ಡ್ ಇಂವ ಒಬ್ಬ ಯಾವುದೋ ದೊಡ್ಡ ಅಧಿಕಾರಿ ಇರ್ದುತಾ ಗ್ಯಾನ ಮಾಡಿಕಂಡ್ ಓಡಿಹೋಗಿ ಸೆಕ್ಯೂರಿಟಿ ಆಫೀಶರ್‌ಗೆ ಹೇಳ್ತ್. ಆಗ ಆ ಸೆಕ್ಯುರಿಟಿ ಆಫೀಶರ್ ಈರಪ್ಪ ಗಾಭರಿಲಿ ತಲೆಗ ತನ್ನ ಟೋಪಿನ ಹಾಕಂಡ್ ಕಂಕುಳಲ್ಲಿ ಒಂದ್ ದೊಣ್ಣೆನ ಸಿಕ್ಕಿಸಿಕಂಡ್ ಹೊರಗೆ ಬಂದ್ ಒಂದ್ ಮಿಲ್ಟ್ರೀ ಸೆಲ್ಯೂಟ್ ಹೊಡ್ತ್. ಎಸ್ಸ್ ಸಾರ್ ತಾ ಹೇಳ್ತ್.

ಆಗ ಈ C.B.I. ಇನ್‌ಸ್ಪೆಕ್ಟರ್ ಕಾರ್‌ನ ಒಳಗೇ ಕುದ್ದ್‌ಕಂಡ್ ತನ್ನ ಐಡೆಂಟೀ ಕಾರ್ಡ್‌ನ ದೂರದಿಂದಲೇ ತೋರ್ಸಿ ನೋಡಿ ನಾನು C.B.I. Inspector, Mr. Raju, from C.B.I. Intelligency Beauro, Madras, ಈಗ ನಾನ್ ಈ ಪ್ಯಾಕ್ಟರಿನ surprise ಚೆಕ್‌ಅಪ್ ಮಾಡಿಕೆ ಬಂದಂವ. go and get me your gate lock, immediatly gate should be locked Quick hurry up ತಾ ಕುದ್ದಲ್ಲಿಂದಲೇ ಆರ್ಡರ್ ಮಾಡಿ ಕಾರ್‌ನ ಡೋರ್‌ನ ಓಪನ್ ಮಾಡಿ ಕೆಳಗೆ ಇಳ್ತ್, ಆ ಸೆಕ್ಯೂರಿಟಿ ಆಫೀಶರ್ ಓಹೋ ನಮ್ಮ ಸಾಹುಕಾರನ ಚರಿತ್ರೆ ಎಲ್ಲಾ ಬಯಲಾಗುಟ್ಟು ಕಂಡದೆ ತಾ ತಿಳ್ಕಂಡ್. ಓಡಿ ಹೋಗಿ ಮೇಯಿನ್ ಗೇಟ್‌ಗೆ lock & key ನ ತಕಂಡ್ ಬಾತ್, ಆಗ ಈ ಇನ್‌ಸ್ಪೆಕ್ಟರ್ ಅವನ ಕೈಯಿಂದ ಆ ಬೀಗನ ಕಿತ್‌ಕಂಡ್ ಮೇಯಿನ್ ಗೇಟ್‌ಗೆ ಲಾಕ್ ಮಾಡಿದರ ಕೀನ ತನ್ನ ಜೋಬೊಳಗೆ ಮಡಗಿ ಕಂಬಕಾಕನ ಸೆಕ್ಯೂರಿಟಿ ಗಾರ್ಡ್ ಆಫೀಸ್ ಒಳಗಡೆಗೆ ಓಡಿ ಹೋಕೆ ನೋಡ್ತ್. ಆಗ ಆ ಗಾರ್ಡ್ ಇಂವ ತಡ್ದ್ ನಿಂಗೆ ಒಳಗಡೆ ಏನೂ ಕೆಲ್ಸ ಇಲ್ಲೆ. ಆ ಕೆಲ್ಸನ ನಾನ್ ಮಾಡಿನೆ. ನೀನ್ ಇಲ್ಲೇ ಕಾಯ್ದುಕಂಡ್ ಕುದ್ದ್‌ಕತ್ತೇಳಿ ಅಂವಂಗೆ ಆರ್ಡರ್ ಮಾಡಿ ಒಳಗಡೆ ರಿಸಪ್ಷನ್ ಗೂಡೆನ ಎದುರುಗಡೆಗೆ ಹೋಗಿ ನಿಂತ್‌ಕಂಡ್, ಹಲೋ ಮೇಡಂ, ನಾನ್ C.B.I. officer. Mr. Raju, ತ್ತೆಳಿ ತನ್ನ ಎದೆ ಜೋಬೊಳಗಿಂದ ಒಂದ್ ಕಾಲೇಜ್ sportsಲಿ ಕೊಟ್ಟಂತಹ ಹಳೆ Identity card ನ ದೊರಂದ ಹಿಡ್ದ್ ತೋರ್ಸಿತ್. ಆಗ ಈ ಗೂಳಿತರ ನುಗ್ಗಿ ಬಂದ ಆಫೀಶರ್‌ನ ನೋಡಿ ಹೆದರಿಕಂಡ್ ಈ ವಿಷಯನ ತನ್ನ ಬಾಸ್‌ಗೆ ತಿಳ್ಸಿಕೆ ಟೆಲಿಫೋನ್‌ನ ಎತ್ತಿಕಂಡತ್. ಆಗ ರಾಜು ಕೂಡ್ಲೆ ಅವಳ ಕೈಯಿಂದ ಫೋನ್‌ನ ಕಿತ್‌ಕಂಡ್ ಕೆಳಗೆ ಮಡಗುತಾ No information to anybody ನೀನ್ ಇಲ್ಲೇ ಸುಮ್ಮನೆ ಕುದ್‌ಕ ಆತ, ತೋರ್ಸ್ ಎಲ್ಲಿ ನಿನ್ನ ಬಾಸ್‌ನ ಚೇಂಬರ್‌ತಾ ಒರಟಾಗಿ ಕೇಳ್ತ್ ಆಗ ಅವಳು ಹೆದರಿಕಂಡ್ ಬಾಸ್‌ನ ಛೇಂಬರ್‌ನ ತೋರ್ಸಿಕೆ ಒದ್ದಾಡ್‌ತಿದ್ದುದರ ನೋಡಿ, ಹೆದರ್‌ಬೇಡ ಗೂಡೆ ನೀನ್, ನಾನ್ ಈ ಪ್ಯಾಕ್ಟರಿನ ಸರಪ್ರೈಚ್ ಚೆಕಿಂಗ್‌ಗೆ ಬಂದೊಳೆ, Tell me which is your Boss Chamber ತಾ ಇನ್ನೊಂದ್ ಸರ್ತಿ ಗಡ್‌ಸಾಗಿ ಕೇಳ್ತ್. ಆಗ ಅವಳು ಹೆದರಿಕಂಡ್ ತನ್ನ ಪಕ್ಕದಲ್ಲಿದ್ದ ಬಾಸ್‌ನ ಚೇಂಬರ್ ಡೋರ್ ಕಡೆಗೆ ಬೆರಳ್ ಮಾಡಿ ತೋರ್ಸಿತ್. Mr. Raju ಆ ಡೋರ್‌ನ ದಡಾರ್‌ತ ತಳ್ಳಿಕಂಡ್ ಒಳಗೆ ನುಗ್ಗಿ, ಆ ಬಾಸ್ ಮುಂದೆ, ಹೋಗಿ ನಿಂತ್‌ಕಂಡ್ I am Raju C.B.I. from Madras ತ್ತೆಳಿ ತನ್ನ ಜೋಬೊಳಗಿಂದ ತನ್ನ Identity card ನ ತೋರ್ಸಿತ್ I want some information regarding your managements & accounts. ಈ ಸಾಹುಕಾರ ಕಷ್ನಾವತಾರ್ ಸಿಂಗ್‌ಗೆ ಈ C.B.I. from Madrass ತ್ತೇಳ್ವ ಶಬ್ದ ಕೆಮಿ

ಪೆಟ್ಟಿನ ಗಾಯ ಹೋದೀತು, ಮಾತಿನ ಗಾಯ ಹೋದೀತೆ?

ಮೇಲೆ ಬಿದ್ದಾಕನೇ ಎದೆಲಿ ನಡುಗಟ ಹುಟ್ಟಿಹೋತ್. ಅದೂ ಅಲ್ಲದೆ ಈ ಆಫೀಶರ್ ಒಳಗೆ ಬಂದಾಗ ಈ ಬಾಸ್‌ಗೆ ಅವರ ಪರ್ಸನಲ್ ಸೆಕ್ರೆಟರಿ ಗೂಡೆ ಪಕ್ಕಲ್ಲೇ ಕುದ್‌ಕಂಡ್ ಕಿತ್ತಳೆ ಹಣ್ಣ್‌ನ ಸುಲ್ದ್ ಅದರ ಒಂದೊಂದೇ ಎಸಳ್‌ನ ಬುಡ್ಸಿಸುಲ್ದ್ ಬಾಸ್‌ನ ಬಾಯಿ ಒಳಗೆ ಇಡ್‌ತಿತ್. ಈ ಸೀನ್ಸ್‌ನ ಹೊರಗಡೆಂದ ಬಂದ ಆಫೀಶರ್ ನೋಡಿ ಬುಟ್ಟಿತ್. ಇದರಿಂದ ಈ ಬಾಸ್‌ಗೆ ಅವಮಾನನೂ ಸಿಟ್ಟೂ ಒಟ್ಟಿಗೆ ಬಂದಿತ್. ಹಂಗಾಗಿ ಈ ಬಂದಿದ್ದ ಮನ್ಸನ ಮುಗ್ಸಿ ಬುಡಿಕೆ ಮೆಲ್ಲಂಗೆ ಪಿಸ್ತೂಲಿಗೋಸ್ಕರ ಟೇಬಲಿನ ಡ್ರಾ ಒಳಗೆ ಕೈ ಹಾಕಿತ್, ಆಗ Inspector Raju ನಗೆ ಆಡಿಕಂಡ್ ಬೆರಳಲ್ಲೇ ಸಂಜ್ಞೆ ಮಾಡಿ ಕಂಡ್ ಹೇಳ್ತ್, ಡೋಂಟ್ ಬೀ ಸಿಲ್ಲೀ Mr. ಕೃಷ್ಣಾವತಾರ್ ಸಿಂಗ್, ನೀನ್ ನಿನ್ನ ಹುಷಾರ್ ತನನ ತೋರ್‍ಸಿಕೆ ಹೋಗ್‌ಬ್ಯಾಡ ನಿನ್ನ ಚರಿತ್ರೆ ಎಲ್ಲಾ ನನ್ನ ಹತ್ರ ಉಟ್ಟು, ತಾ ಹೇಳಿಕಾಕನ ಮೆಲ್ಲಂಗೆ ಪೋನ್‌ಮಾಡಿಕೆ ನೋಡ್ತ್ ನೋ... ನೋ... ನೋ... ಟೆಲಿಪೋನ್ ಮೆಸ್ಸೇಜ್ ಟು ಎನಿಬಡಿ. ಮೇಟಗಳ್ಳಿ ಸ್ಟೇಶನ್‌ಲಿ ಇನ್ಸ್‌ಪೆಕ್ಟ್ರನ consult. ಮಾಡಿಕಂಡೇ ನಾನ್ ಇಲ್ಲಿಗೆ ಬಂದೊಳೆ. ನೋಡ್ ಇಲ್ಲಿ ನಾನೇ ನಿನ್ನ ಪ್ಯಾಕ್ಟ್ರಿದ್ ಮೇಯಿನ್ ಗೇಟ್‌ದ್ ಬೀಗನ ಹಾಕಂಡ್ ಬಂದೊಳೆತ್ತೇಳಿ ಕೀ ಗೊಂಚಲ್‌ನ ಬೆರಳ್‌ಲಿ ತಿರಗಿಸಿಕಂಡ್ ತೋರ್‍ಸಿತ್. ಈಗ ನೀನ್ ಈ ಪ್ಯಾಕ್ಟರಿ ಒಳಗಿಂದ ಹೊರಗೆ ದಾಟುವಂಗೆ ಇಲ್ಲೆ. ನೀನ್ ಇಲ್ಲೇ ಆರಾಂ ಆಗಿ ನನ್ನ ಜೊತೆಗೆ ಕುದ್‌ಕ. ನಾನ್ ಕೇಳುವಂತಹ ಎಕೌಂಟ್ಸ್‌ಗಳ, ಅದರ ದಾಖಲೆಗಳ, ವಿವರಗಳ ನಂಗೆ ತೋರ್‍ಸಕು. ನನ್ನ ಜೊತೆ ಕೂಲ್ ಆಗಿ ಬಿಹೇವ್ ಮಾಡಿರೆ ನಿಂಗೇ ಒಳ್ಳೆದ್ ಗೊತ್ತಾತಾ? ಈಗ ನಿನ್ನ ಪರ್ಸ್‌ನಲ್ ಸೆಕ್ರೆಟರಿ ಆಗಲೀ ಎಕೌಂಟ್ಸ್ ಸೆಕ್ಷನ್‌ನವನಾಗಲೀ ಯಾರೂ ಹೊರಗಡೆ ಹೋಗುವಂಗೇ ಇಲ್ಲೆ. ನನ್ನ ಕೆಲ್ಸ ಆದಷ್ಟ್ ಬೇಗ ಆರಾಂ ಆಗಿ ಮುಗ್ದ್ ಮೇಲೆ ಮಾತ್ರ ನಿಮ್ಮನ್ನ ನಾನ್ ಹೊರಗೆ ಹೋಕೆ ಬುಡ್ದುತಾ ಹೇಳ್ತ್. ಇದರ ಕೇಳಿ ಈ ಮಹಾ ಪ್ರಳಯಾಂತಕ ಖದೀಮ ಸಾಹುಕಾರನ ಮುಖಲಿ ಬೆವರ ಹನಿ ಹೊರಟ್ ಅದಲ್ಲಾ ಮಣಿಕಟ್ಟ್ ಒಂದೊಂದೇ ಹನಿ ಮುಖದ ಮೇಲೆ ಹರಿಯುವಂಗೆ ಆಗಿಹೋತ್. ಯಾಕೆತ್ತೇಳಿರೆ ಈಗ ಈ ಸಾಹುಕಾರ ಅವನ ಪ್ಯಾಕ್ಟರಿ ಒಳಗೇ ದಿಗ್ಬಂದನ ಆಗಿ ಹೋಗಿತ್. ಇದೂವರೆಗೂ ಈ ಸಾಹುಕಾರ ಪ್ಯಾಕ್ಟರಿ ವ್ಯವಹಾರದ ಯಾವುದೊಂದೂ ಲೆಕ್ಕಪತ್ರ ಗಳ ದಾಖಲೆಗಳ ಮಡಗಿತಿಲ್ಲೆ. ಎಲ್ಲಾ ಲೆಕ್ಕಗಳನ್ನ ಉಡಾಫೆಯಿಂದ ದಬ್ಬಾಳಿಕೆಂದ ಬರೀ ಬೋಗಸ್ ಲೆಕ್ಕಗಳಿಂದಲೇ ಇದೂವರೆಗೂ ನಡ್ಸಿಕಂಡ್ ಬಂದಿತ್. ಕರಿಯಿರಿ ನಿನ್ನ ಪರ್ಸ್‌ನಲ್ ಸೆಕ್ರೆಟರಿನ ಮತ್ತೆ ಎಕೌಂಟೆಂಟರ್‌ಗಳನ್ನು ನಾನ್ ಕೇಳತಕ್ಕಂತಹ ಲೆಡ್ಜರ್ ಬುಕ್ಕಗಳನೆಲ್ಲಾ ಇಲ್ಲಿಗೆ ತರ್‍ಸಿ ಕೊಡಕು. ಹಾಂ! ಕ್ವಿಕ್, ಕ್ವಿಕ್, ಹಂಗೆ ಹೇಳಿಕಾಕನ, ಕೃಷ್ಣಾವತಾರ್ ಸಿಂಗ್ ಗ್ಯಾನ ಮಾಡ್ತ್. ಇಂವ ಬಹಳ ಧೈರ್ಯಶಾಲಿ ಅಧಿಕಾರಿ ಇರೋಕು. ನನ್ನ ಗೋಲ್‌ಮಾಲ್ ವ್ಯವಹಾರಗಳ ಬಗ್ಗೆ ಯಾರೊ ನಂಗೆ ಪೈಪೋಟಿ ಇರತಕ್ಕ ಬೇರೆ ಗಾರ್ಮೆಂಟ್ ಪ್ಯಾಕ್ಟರಿಯವು ನನ್ನ ಮೇಲೆ ಹೊಟ್ಟೆಕಿಚ್ ಪಟ್ಟ್‌ಕಂಡ್ ನನ್ನ ಗುಪ್ತ ವ್ಯವಹಾರಗಳ ಬಗ್ಗೆ ಸೆಂಟ್ರಲ್ ಅಧಿಕಾರಿಗಳಿಗೆ ನನ್ನ ಮೇಲೆ ಆರೋಪಗಳನ್ನ ಹಾಕಿಸಿರುವ್ರೊ, ಆದರಿಂದ್ಲೇ ಈ ಸರ್ತಿ ನನ್ನ ವ್ಯವಹಾರನ ಚೆಕ್‌ಅಪ್ ಮಾಡಿಕೆ ಹೊರಗಡೆಂದ ಜನ ಬಂದೊಳೊದು. ಇಲ್ಲಿನ ಯಾವುದೇ ಅಧಿಕಾರಿಗ ಆಗಿತ್ತಿದ್ರೆ ನಂಗೆ ಬೇಜಾರಿತ್ತಿಲ್ಲೆ. ಯಾಕೆತ್ತೇಲಿರೆ ಈಗಾಗಲೇ ಅವೆಲ್ಲಾ ನಾನ್ ಹೇಳಿದಂಗೆ ತಲೆ ಆಡಿಸಿಕಂಡ್ ಇದ್ದವೆ. ಆದ್ರೇ ಈಗ ನನ್ನ ಎದುರುಗಡೆ ಬಂದ್ ನಿಂತ ಈ ಅಧಿಕಾರಿನ ಕೆಣಕಿ ಎದುರು ಹಾಕೊಂಬಕ್ಕಿಂತ ಇಂವಂ ಗೂ ಉಪಾಯಲಿ ಮಾಮೂಲಿ ರುಚಿನ ತೋರ್‍ಸಿ ಆಸೆ ಹುಟ್ಟಿಸಿ ನನ್ನ ಆನೆ ಖೆಡ್ಡ ಹಳ್ಳದ ಒಳಗೆ ಬೀಳ್ಸಿ ಕಂಡ್ ಆಮೇಲೆ ಉಪಾಯಲಿ ನಯಿಸ್ಸಾಗಿ ಕಳ್ಸಿ ಕೊಟ್ಟರೆ ಆದುತಾ ಗ್ಯಾನಮಾಡಿ ಅವನ ಪರ್ಸನಲ್ ಸೆಕ್ರಟರಿನ ಮೆಲ್ಲಂಗೆ ಘತ್ರಕ್ಕೆ ಕರ್ದ್ ಕಣ್ ಸನ್ನೆ ಮಾಡಿ ಹೇಳಿ ಮತ್ತೆ ಎಕೌಂಟ್ಸ್ ಗೂಡೆನ ಕರಿಯಕೆ ಹೇಳ್ತ್.

ಆಗ ಒಳಗಡೆಂದ ಒಂದ್ ಗೂಡೆ ಓಡಿ ಬಂದ್ ಈ C.B.I. ಇನ್‌ಸ್ಪೆಕ್ಟರಿಗೆ ಕಣ್ಣ್ ಮಿಟ್‌ಕಿಸಿ ಸ್ಟೈಯಿಲ್ ಮಾಡಿ ನಮಸ್ಕಾರ ಮಾಡಿ. ಯಸ್ ಸಾರ್ ತಾ ಹೇಳಿ ನಿಂತ್ ಕಂಡತ್. ಆಗ ಈ ಗೂಡೆನ ಹತ್ರ ಹೇಳ್ತ್ ನೋಡಿ ಮೇಡಂ ಈ ಪ್ರೆಸೆಂಟ್ ಇಯರ್‌ದ್ ಎಲ್ಲಾ ಲೆಡ್ಜರ್‌ಗಳನ್ನ ಇಲ್ಲಿಗೆ ತಕಂಡು ಬರೋಗು. ನಾನ್ ಹೇಳಿ, ಕೇಳಿದಂಗೆ ನೀವುಗಳು ಅದರ ವಿವರಣೆನ ಕೊಡೋಕು. ಈಗ ಕೂಡ್ಲೆ ನನ್ನ ಹತ್ರಕ್ಕೆ 1) ಎಟೆಂಡೆನ್ನಸ್ ರಿಜಿಸ್ಟರ್, ಅದರಲ್ಲಿ ಕ್ಯಾಷ್ಯುಲ್ & ಪರ್ಮನೆಟ್ಸ್ ಎರಡೂ 2) ಸ್ಯಾಲರಿ ರಿಜಿಸ್ಟರ್ & ಮಸ್ಟ್ರೋಲ್ ರಿಜಿಸ್ಟರ್, 3) ಇ.ಎಸ್.ಐ ಮೆಟಿಟೆನ್ಸ್ ಲೆಡ್ಜರ್ 4) ಪ್ರಾವಿಡೆಂಟ್ ಲೆಡ್ಜರ್, 5) O. T. Paid Accounts, 6) Cantreen & labour welfare accounts. 7) Monthly Paying charitable accounts, 8) cash & credit purchasings 9) Cash Book 10) Personal ledger, 11) Sales & Trial Balance ಹಿಂಗೇ ಈ C.B.I. ಆಫೀಶರ್ ಹೇಳಿಕಂಡ್ ಹೋಕಾಕನ ಆ ಎಕೌಟೆಂಟ್ ಗೂಡೆ ಇವನ ಲೆಡ್ಜರ್‌ಗಳ ಲಿಸ್ಟ್‌ನ ನೋಡಿ ಸುಸ್ತು ಹೊಡ್ತ್ ಹೋತ್. ಯಾಕೆತ್ತೇಳಿರೆ ಇಂವ ಕೇಳ್ದ್ 12 ಲೆಡ್ಜರ್‌ಗಳಲ್ಲಿ ಮುಖ್ಯವಾಗಿ ಬರೇ ಎರಡ್ ವ್ಯವಹಾರಗಳ ಲೆಕ್ಕಗ ಕೂಡ ಜಾರಿಯಾದ ಲೆಡ್ಜರ್‌ನ ಮೆಯಿಂಟೇನ್ಸ್ ಮಾಡಿತಿಲ್ಲೆ. ಯಾಕೆತ್ತೇಳಿರೆ ಈ ಬಾಸ್‌ನ ಅಪ್ಪಣೆನೇ ಆ ತರ ಇತ್ತ್. ಇಂವನ ಪ್ಯಾಕ್ಟರಿಲಿ ನಡೆಯ ತಕ್ಕ ವ್ಯವಹಾರ ಕೋಟ್ಯಾಂತರ ರೂಪಾಯಿ ಗಳಿದ್ದರೂ ಯಾವ ಖರ್ಚು ವೆಚ್ಚಗಳಿಗಾಗಲೀ ಲಾಭ ನಷ್ಟಗಳಿಗಾಗಲಿ ಏನೊಂದೂ ಲೆಕ್ಕಗಳನ್ನೂ ಇಡ್‌ಬೇಕಾಗಿಲ್ಲೆತಾ ಹೇಳಿತ್ತ್. ಯಾಕೆತ್ತೇಳಿರೆ ಇಷ್ಟೊಂದು ದೊಡ್ಡ ವ್ಯವಹಾರ ಮಾಡಿ ಕಾಕನ ಸರಕಾರಕ್ಕೆ ಕೋಟ್ಯಾಂತರ ರೂಪಾಯಿ ಸೇಲ್ಸ್ ಟ್ಯಾಕ್ಸ್ ಇನ್‌ಕಮ್ ಟ್ಯಾಕ್ಸ್ ಕೊಡಿಕಾದೆ. ಅಲ್ಲದೆ ಪ್ಯಾಕ್ಟರಿ ಒಳಗೆ ಕೆಲಸ ಮಾಡುವಂತಹ ಒಂದು ಸಾವಿರದಷ್ಟ್ ಕೆಲಸಗಾರರಿಗೆಲ್ಲಾ ಸರಿಯಾದ ಲೆಕ್ಕ ಮಡಗಿ ಅವುಕೆಲ್ಲಾ ಹಾಜರಾತಿ ಹಾಕಿ, ಲೆಕ್ಕ ತೋರಿಸಿರೆ ಅದರ ಜೊತೆಗೆ ಅವುಕೇಳಿದಷ್ಟ್ ಸಂಬಳದ ಕೊಡಿಕಾದೆ. ಆಮೇಲೆ

15ನೇ ಪುಟಕ್ಕೆ

ಕಲ್ಲನ್ನಾದರೂ ಕರಗಿಸಬಹುದು, ಕಪಟಿಯ ಎದೆ ಕರಗದು

# ಅನಿಲ್ ಎಚ್. ಟಿ. ಸೇರಿದಂತೆ ಕೊಡಗಿನ ಮೂವರು ಪತ್ರಕರ್ತರಿಗೆ ರಾಜ್ಯ ಮಟ್ಟದ ಪ್ರಶಸ್ತಿ.


ಅನಿಲ್ ಎಚ್. ಟಿ.


ರಮೇಶ್ ಉತ್ತಪ್ಪ


ಜಗದೀಶ್ ಬೆಳ್ಯಪ್ಪ

ಕರ್ನಾಟಕ ರಾಜ್ಯ ಕಾರ್‍ಯನಿರತ ಪತ್ರ ಕರ್ತರ ಸಂಘದ 1998-99 ರ ರಾಜ್ಯ ಪ್ರಶಸ್ತಿಗಳು ಪ್ರಕಟ ಗೊಂಡಿದ್ದು, ಈ ಬಾರಿ ಕೊಡಗಿನ ಜನಪ್ರಿಯ ಯುವ ಲೇಖಕ ಅನಿಲ್ ಎಚ್. ಟಿ. ಸೇರಿದಂತೆ ಜಿಲ್ಲೆಯ ಮೂವರು ಪ್ರಶಸ್ತಿಗೆ ಅರ್ಹರಾಗಿದ್ದಾರೆ.

1999ರಲ್ಲಿ ಉತ್ತಮ ಮಾನವೀಯ ವರದಿಗೆ ನೀಡಲಾಗುವ ಪ್ರಶಸ್ತಿಯು 3-7-99 ರಂದು "ಪ್ರಜಾವಾಣಿ"ಯಲ್ಲಿ ಪ್ರಕಟಗೊಂಡ ಅನಿಲ್ ಎಚ್. ಟಿ. ಯವರ ಓಂ ನಮೋ ಏಡ್ಸಮ್ಮ' (ವಿಶ್ವದ ಮೊದಲ ಏಡ್ಸ್ ದೇವಾಲಯ) ಎಂಬ ಲೇಖನಕ್ಕೆ ಲಭ್ಯವಾಗಿದೆ.

ಈ ಹಿಂದೆ ಪ್ರಜಾ ವಾಣಿಯಲ್ಲಿ ದಿ. 24-11-99 ಪಾತಂಪುರ ದಲ್ಲೊಂದು ವಿದ್ಯುತ್ ಕ್ರಾಂತಿ" ಎಂಬ ಶಿರೋನಾಮೆಯಡಿ ಪ್ರಕಟ ಗೊಂಡ ಅನಿಲ್ ಎಚ್. ಟಿ. ಅವರ ಲೇಖನಕ್ಕೆ ಪದ್ಯಾಣ ಗೋಪಾಲ ಕೃಷ್ಣ ಸಂಸ್ಮರಣಾ ಗ್ರಾಮೀಣ ವರದಿ ಪ್ರಶಸ್ತಿ ದೊರೆತಿತ್ತು.

ಶ್ರೀಯುತ ಅನಿಲ್ ಅವರು ಕಳೆದ ಹತ್ತು ವರ್ಷಗಳಿಗೂ ಮೇಲ್ಪಟ್ಟು ಪತ್ರಿಕಾ ರಂಗದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಕೊಡಗಿನ ಪ್ರಸಿದ್ಧ ದೈನಿಕ "ಶಕ್ತಿ"ಯ ಮೂಲಕ ತಮ್ಮ ಲೇಖನವನ್ನು ಆರಂಭಿಸಿದವರು. ಶ್ರೀಯುತರ ವರದಿ ಲೇಖನಗಳು ಕರ್ನಾಟಕದ ಪ್ರಸಿದ್ಧ ದಿನಪತ್ರಿಕೆ ಗಳಲ್ಲೂ ವಾರ ಪತ್ರಿಕೆಗಳಲ್ಲೂ ಪ್ರಕಟಗೊಳ್ಳುತ್ತಿವೆ. "ಕನ್ನಡ ಪ್ರಭ" ಹಾಗೂ ಉದಯ ಟಿ.ವಿ.ಯ ಕೊಡಗು ಜಿಲ್ಲಾ ವರದಿಗಾರರಾಗಿರುವ ಅನಿಲ್ ಅವರು ಡಾ|| ರಾಜ್ ಅಪಹರಣದ ಬಳಿಕ 'ಶಕ್ತಿ' ದಿನ ಪತ್ರಿಕೆಯಲ್ಲಿ ಬರೆಯುತ್ತಿರುವ ನಿರಂತರ ಲೇಖನಮಾಲೆ ಓದುಗರನ್ನು ಆಕರ್ಷಿಸುತ್ತಿದೆ.

**ರಮೇಶ್ ಉತ್ತಪ್ಪ :** ಉತ್ತಮ ತನಿಖಾವರದಿಗೆ ನೀಡಲ್ಪಡುವ "ಗಿರಿಧರ್" ಪ್ರಶಸ್ತಿಯು "ಆಂದೋಲನಾ" ದಿನಪತ್ರಿಕೆಯ ಜಿಲ್ಲಾ ವರದಿಗಾರ ಶ್ರೀಯುತ ರಮೇಶ್ ಉತ್ತಪ್ಪ ಅವರಿಗೆ ದೊರೆತಿದೆ (ವರಿದಿ : ಕುಶಾಲನಗರದಲ್ಲಿ ರಾಹುಲ್ ಪೀಟರ್ ಪಂಗನಾಮ)

**ಜಗದೀಶ್ ಬೆಳ್ಯಪ್ಪ:** ಮಂಡ್ಯದ ಆರ್. ಎಲ್. ವಾಸುದೇವ ರಾವ್ ಅವರ ಹೆಸರಿನಲ್ಲಿ ಅತ್ಯುತ್ತಮ ಅರಣ್ಯ ಲೇಖನಕ್ಕೆ ಪ್ರಶಸ್ತಿಯು 'ಶಕ್ತಿ' ದಿನಪತ್ರಿಕೆಯ ಉಪಸಂಪಾದಕ ಜಗದೀಶ್ ಬೆಳ್ಯಪ್ಪ ಅವರ ಪಾಲಾಗಿದೆ (ವರದಿ : ಪ್ರವಾಸಿಗರ ನಿರಾಶೆಯ ತಾಣವಾದ ನಿಸರ್ಗಧಾಮ)

ದಿನಾಂಕ 24 ರಂದು ಬೆಳಗಾವಿಯಲ್ಲಿ ನಡೆಯಲಿರುವ ರಾಜ್ಯ ಪತ್ರಕರ್ತರ ಸಮ್ಮೇಳನದಲ್ಲಿ ರಾಜ್ಯದ ನೀರಾವರಿ ಸಚಿವ ಎಚ್. ಕೆ. ಪಾಟೀಲ್ ಅವರಿಂದ ಜಿಲ್ಲೆಯ ಈ ಮೂವರು ಪತ್ರಕರ್ತರು ಪ್ರಶಸ್ತಿ ಸ್ವೀಕರಿಸಿದರು. **– ಸಂಗಾತಿ.**

---

# ಅರಳುವ ಪ್ರತಿಭೆ : ಗೌಡ ಜನಾಂಗದಲ್ಲೊಂದು ಗಾನ ಕೋಗಿಲೆ ಮಾಸ್ಟರ್ ಕಾನೇಹಿತ್ಲು ಚೇತನ್ ಕಾಳಪ್ಪ



ಇವರು ಮೂಲತಃ ಕೊಡಗಿನ ಭಾಗಮಂಡಲ ನಾಡು ಚೇರಂಗಾಲ ಗ್ರಾಮದವರು. ಇವರು ಕುಶಾಲನಗರದಲ್ಲಿ ಸ್ವಂತ ನಿವಾಸ ಹೊಂದಿದ್ದು, ಅಲ್ಲೆ ನೆಲೆಸಿರುತ್ತಾರೆ. ಇವರ ತಂದೆ ತಾಯಿ ಇಬ್ಬರು ಸರ್ಕಾರಿ ಉದ್ಯೋಗಿಗಳು. ತಂದೆ ಕಾನೇಹಿತ್ಲು ಕಾಳಪ್ಪ, ತಾಯಿ ಚೆನ್ನಮ್ಮ. ಇವರ ಏಕಮಾತ್ರ ಪುತ್ರರಾದ ಚೇತನ್ ಕೊಡಗಿನ ಮಡಿಕೇರಿಯ ಬ್ಲೊಸಮ್ ವಿದ್ಯಾಶಾಲೆಯಲ್ಲಿ ತಮ್ಮ 10ನೇ ತರಗತಿ ವ್ಯಾಸಂಗ ಮಾಡುತ್ತಿರುವರು. ಇವರು ಜಿಲ್ಲೆಯಲ್ಲಿ ಈ ಮೊದಲು ಪ್ರಾಥಮಿಕ ಶಾಲೆ, ಪ್ರೌಢಶಾಲಾ ವಿಭಾಗದಲ್ಲಿ ತಾಲ್ಲೂಕು ಹಾಗೂ ಜಿಲ್ಲಾಮಟ್ಟದಲ್ಲಿ ಹತ್ತು ಹಲವಾರು ಕಾರ್ಯಕ್ರಮಗಳಲ್ಲಿ ಭಾಗವಹಿಸಿ ತಮ್ಮ ಸುಗಮ ಸಂಗೀತದ ಇಂಪನ್ನು ಹರಡಿ ಪ್ರಶಸ್ತಿಯನ್ನು ಗಳಿಸಿದ್ದಾರೆ. ಇದೇ ರೀತಿ ಕಳೆದ ಆಗಸ್ಟ್ -2000 ದಂದು ಕೊಡಗಿನಲ್ಲಿ ನಡೆದ ಎಂ.ಎಸ್.ಐ.ಎಲ್.ರವರ ಜಿಲ್ಲಾ ಮಟ್ಟದ ಸುಗಮಸಂಗೀತ ಸ್ಪರ್ಧೆಯಲ್ಲಿ ಭಾಗವಹಿಸಿ ಬಾಲಕರ ವಿಭಾಗದಲ್ಲಿ ಜಿಲ್ಲೆಗೆ ಮೊದಲ ಸ್ಥಾನವನ್ನು ಪಡೆದಿರುತ್ತಾರೆ. ಅದೇ ರೀತಿ ಬೆಂಗಳೂರಿನ ದೂರದರ್ಶನ ಕೇಂದ್ರದಲ್ಲಿ ನಡೆದ ಎಂ.ಎಸ್.ಐ.ಎಲ್. ಅವರದೇ ಆದ ರಾಜ್ಯ ಮಟ್ಟದ ನಿತ್ಯೋತ್ಸವ ಸುಗಮ ಸಂಗೀತ ಕಾರ್ಯಕ್ರಮದಲ್ಲಿ ಭಾಗವಹಿಸಿ ಅಲ್ಲಿನ ಹಿರಿಯ ಗಾಯಕ ಗಾಯಕಿಯರಿಂದ ಪ್ರಶಂಸೆ ಪಡೆದಿರುತ್ತಾನೆ ಇಂತಹ ಅರಳುವ ಪ್ರತಿಭೆಗೆ ನಮ್ಮ ಗೌಡ ಜನಾಂಗ ಬಾಂದವರು ಹೆಚ್ಚಿನ ಹುರುಪು ನೀಡಿದಲ್ಲಿ ಮುಂದೊಂದು ದಿನ ಬೃಹತ್ ಕೋಗಿಲೆಯಾಗುವದರಲ್ಲಿ ಎರಡನೆಯ ಮಾತಿಲ್ಲ. **– ಸಂಗಾತಿ.**

---

ಪ್ರೀತಿಯಿಂದ ಕೊಟ್ಟರೆ ನೀರು ಅಮೃತವಾಗುವುದು

## ಸಂಗಾತಿ ಭವಿಷ್ಯ : ಅಕ್ಟೋಬರ್ 1 ರಿಂದ 15, 2000

ಜೋತಿಷ್ಯರು : ಗಿರೀಶ್‌ಕುಮಾರ್, ಕೊಯನಾಡು

ಮೇಷ ರಾಶಿ : ದೈವಾನುಕೂಲವಿದೆ. ಗೃಹವಲಯದಲ್ಲಿ ಸುಖ ಶಾಂತಿ ನೆಮ್ಮದಿ ನೆಲೆಸಬಹುದು. ಶತ್ರುಗಳು ದೂರವಾಗುವರು ಸರ್ವ ಕಾರ್ಯಗಳಿಗೆ ಜಯ ಪಾಲಿನದ್ದಾಗುತ್ತದೆ

ವೃಷಭ ರಾಶಿ : ಜನ್ಮರಾಶಿಯ ಶನಿಯಿಂದಾಗಿ ದೇಹಕ್ಕೂ ರೋಗ ಬರಬಹುದು. ಮನಸ್ಸು ಅಲ್ಲೋಲ್ಲ ಕಲ್ಲೋಲವಾಗುವುದು. ಗೃಹವಲಯದಲ್ಲಿ ನೆಮ್ಮದಿ ಇಲ್ಲ. ಶನಿ ಜಪ ಮಾಡಿಕೊಂಡು ಬನ್ನಿ.

ಮಿಥುನ ರಾಶಿ : ದೇವತಾನುಗ್ರಹವಿದೆ. ಗೃಹವಲಯದಲ್ಲಿ ನೆಮ್ಮದಿ ಉಟಾದಿತು. ಶುಭ ಕಾರ್ಯಗಳಿಗೆ ಉತ್ತಮ ಫಲವಿದೆ. ಹಣಕಾಸಿನ ವ್ಯವಹಾರದಲ್ಲಿ ನೆಮ್ಮದಿ ಇದೆ.

ಕರ್ಕಾಟಕ ರಾಶಿ : ದೈವಾನುಕೂಲವಿಲ್ಲ. ಗೃಹ ವಲಯದಲ್ಲಿ ಕಷ್ಟಗಳು ದೂರಾಗುವುದು. ಭೂಸಂಬಂಧ ವ್ಯಾಜ್ಯಗಳು ಬರಬಹುದು. ಪ್ರಯಾಣದಿಂದ ತೊಂದರೆಯಾಗಬಹುದು. ಹಣಕಾಸಿನ ವ್ಯವಹಾರ ಸಾಧಾರಣ ಮಟ್ಟಿಗಿದೆ.

ಸಿಂಹ ರಾಶಿ : ಆರೋಗ್ಯ ಸಾಧಾರಣ ಮಟ್ಟಿಗೆ ಸುಧಾರಿಸುವುದು. ಗೃಹ ವಲಯದಲ್ಲಿ ದೇವತಾ ಕಾರ್ಯ ಮಾಡುವಿರಿ. ಆದರೆ ಹಣಕಾಸಿನ ವಿಷಯದಲ್ಲಿ ಸಾಧಾರಣ ನೆಮ್ಮದಿ.

ಕನ್ಯಾ ರಾಶಿ : ದೈವಾನುಕೂಲವಿದೆ. ಗೃಹ ವಲಯದಲ್ಲಿ ತುಸು ನೆಮ್ಮದಿ. ಭೂಸಂಬಂಧ ಇದ್ದ ಹಳೆಯ ತಕರಾರುಗಳು ಭುಗಿಲೇಳುವುದು. ಹೊಸ ವ್ಯವಹಾರಕ್ಕೆ ಇದು ತಕ್ಕ ಸಮಯವಲ್ಲ. ದೇವತಾರಾಧನೆ ಮಾಡಿ

ತುಲಾ ರಾಶಿ : ದೈವಾನುಕೂಲವಿದೆ. ಗೃಹ ವಲಯದಲ್ಲಿ ತುಸು ನೆಮ್ಮದಿ ಇದೆ. ಹಣಕಾಸು ಕೈಗೂಡುವುದು. ವ್ಯಾಪಾರದಲ್ಲಿ ನಷ್ಟ ಅನುಭವಿಸುವಿರಿ. ಗುರು ಜಪ ಮಾಡಿಸಿರಿ.

ವೃಶ್ಚಿಕ ರಾಶಿ : ಉದ್ಯೋಗ, ವ್ಯವಹಾರ ಇತರ ವಿಷಯಗಳಲ್ಲಿ ಸಾಧನೆ ಪ್ರಗತಿದಾಯಕ, ಆದಾಯ ಹೊಂದಿದಂತೆ ಋಣ ಮುಕ್ತರಾಗುವ ಬಯಕೆ ಈಡೇರಿಸಿಕೊಂಡರೆ ಭಾರವೆನ್ನುವುದು ಹಗುರವಾಗುವುದರಲ್ಲಿ ಸಂದೇಹವಿಲ್ಲ. ಶುಭ ಕಾರ್ಯಗಳೇನೆ ಇದ್ದರು ಈಗ ನೆರವೇರಿಸಲು ಅನುಕೂಲ ಒದಗಿದೆ.

ಧನಸ್ಸು ರಾಶಿ : ದೈವಾನುಕೂಲವಿಲ್ಲ. ಅಪಘಾತ ಸಂಭವವಿದೆ. ಪ್ರಯಾಣಿಸುವಾಗ ಎಚ್ಚರ ಅಗತ್ಯ. ಸ್ವಜನರಿಂದ ವಂಚನೆಗೆ ಒಳಗಾಗುವಿರಿ. ಆರೋಗ್ಯ ಕ್ಷೀಣಿಸುವುದು. ದೇವತಾರಾಧನೆಯಿಂದ ಶುಭ

ಮಕರ ರಾಶಿ : ದೈವಾನುಕೂಲವಿದೆ. ಶತ್ರುಗಳು ದೂರಾಗಿ ನೆಮ್ಮದಿಯಾಗುವುದು. ಆದರೆ ಇನ್ನೊಂದೆಡೆ ಅಪವಾದಕೊಳುವಿರಿ. ಹಣಕಾಸಿನ ವ್ಯವಹಾರ ಕೈಗೂಡುವುದು. ಶನಿಯನ್ನು ಆರಾಧನೆ ಮಾಡಿರಿ.

ಕುಂಭ ರಾಶಿ : ದೈವಾನುಕೂಲವಿಲ್ಲ. ಗೃಹವಲಯದಲ್ಲಿ ಕಿರಿಕಿರಿ ತಪ್ಪಿದ್ದಲ್ಲ. ವ್ಯವಹಾರ ಉದ್ಯೋಗದಲ್ಲಿ ಯಶಸ್ಸು ಸಿಗುವುದು. ಹಣಕಾಸು ವ್ಯವಹಾರದಲ್ಲಿ ಲಾಭವಿದೆ. ಶನಿಯ ಆರಾಧನೆ ಮಾಡಿಕೊಂಡು ಬನ್ನಿ.

ಮೀನ ರಾಶಿ : ದೈವಾನುಕೂಲವಿಲ್ಲ. ಮನಸ್ಸಿನಲ್ಲಿ ಚಂಚಲತೆ. ಗೃಹ ವಲಯದಲ್ಲಿ ನೆಮ್ಮದಿ ಇಲ್ಲ. ನಂಬಿದವರೆ ಮೋಸ ಮಾಡುವರು. ವಂಚನೆಗೆ ಒಳಗಾಗುವಿರಿ. ಅಪವಾದ ತಪ್ಪಿದ್ದಲ್ಲ.

---

## ದಂತ ಚೋರ

ಕಾಡಿನಲ್ಲೊಬ್ಬ ದಂತ ಚೋರ
ಪ್ರತೀ ದಿನ ಅವನದ್ದೇ ದೊಡ್ಡ ಪ್ರಚಾರ
ಅಮವಾಸೆಯ ದಿನ ಅವನ ಕಾರ್ಯ
ಬೇರೆ ದಿನ ಅವನಿಗೆಲ್ಲಿ ಧೈರ್ಯ
ಈಗ ಡಾ. ರಾಜ್ ವೀರಪ್ಪನ್ ಬೇಟೆ
ಪಾಪ ಎಸ್. ಎಂ. ಕೃಷ್ಣನಿಗೆ ಜನರ ತರಾಟೆ
ಬಿಡಬೇಕು ಈಗ ಕೃಷ್ಣ ಚಕ್ರ
ಆಗಲೇ ವೀರಪ್ಪನ ತಲೆ ವಕ್ರ
ಕನ್ನಡದ ಕಣ್ಮಣಿ ರಾಜ್ ಅಪಹರಣ
ನಿಜವಾಗಿಯೂ ಇದು ಕನ್ನಡಿಗರ ಅಪಹರಣ
ಎಪ್ಪತ್ತನಾಲ್ಕರ ಇಳಿವಯಸ್ಸಿನಲ್ಲಿ ವನವಾಸ
ಜೊತೆಗೆ ಚಿತ್ರರಂಗದ ಕಾರ್ಮಿಕರಿಗೆ ಉಪವಾಸ
ಗೋಪಾಲನಿಗೆ ಬೇಕು ಕೃಷ್ಣನ ಆದೇಶ
ವೀರಪ್ಪನ್‌ಗೆ ಬೇಕು ಗೋಪಾಲನ ಸಂದೇಶ
ದೇವರು ಕರುಣಿಸಲಿ ರಾಜ್‌ಗೆ ಪೂರ್ಣ ಶಕ್ತಿ
ಈ ಕೂಡಲೇ ಆಗಲಿ ವೀರಪ್ಪನ್‌ನಿಂದ ಮುಕ್ತಿ

**ಕುಂಟುಪುಣಿ ರಾಮಕೃಷ್ಣ, ಗೋಣಿ ಮರೂರು**

---

**ಸವತಿ ಮತ್ಸರ** ಚಾಂಗನ ಸಿ. ಪೂವಯ್ಯ, ಮೊಣ್ಣಂಗೇರಿ

ಕಾಡಿಸಲಾರದು ಹೆಂಡವು
ಅತಿಯಾಗಿ ಎಂಬ ಅರಿವಿದ್ದೂ
ಅಡ್ಡಿಯಾಗುವಳಲ್ಲ ಹೆಂಡತಿ
(ಹೆಂಡ ಅತಿ?) ತನ್ನ ಗಂಡನ
ಹೆಂಡದ ಸಹವಾಸಕೆ ! ಇರಬಹುದೇ
ಅವಳಿಗೆ ಸವತಿ ಮತ್ಸರ?

---

**ಇದ್ದುದನ್ನು ಇದ್ದ ಹಾಗೆ ಹೇಳಿದರೆ, ಎದ್ದು ಬಂದು ಎದೆಗೆ ತುಳಿಯುತ್ತದೆ**

# ಕುಕ್ಕಾ

– ಬಾರಿಯಂಡ ಜೋಯಪ್ಪ

ಕಾಫಿ ಹಣ್ಣನ್ನು ಕಬ್ಬೆಕ್ಕು ಅಳಿಲು ಮತ್ತು ಹಕ್ಕಿಗಳು ತಿಂದು ಹಾಳು ಮಾಡಿದರೆ ಏಲಕ್ಕಿ ಬೆಳೆಯನ್ನು ಕಪಿಗಳು, ಕಪ್ಪೆ, ಇಲಿ, ಬಸವನ ಹುಳು, ಅಡಿಕೆ ಹುಳು ಮುಂತಾದವು ತಿಂದು ನಷ್ಟ ಮಾಡುತ್ತವೆ. ಕಪಿಗಳು ಏಲಕ್ಕಿ ಗಿಡವನ್ನು ಸಿಗಿದು ಚಿಗುರು ತಿರುಳನ್ನೇ ತಿಂದು ಬಿಡುತ್ತವೆ.

ಅಪ್ಪಿ ಚೇರಂಬಾಣೆಯ ಜನ. ಮರಗೆಣಸು, ಬೆಲ್ಲದ ಗೆಣಸು, ಕೆಸುವಿನ ಗೆಡ್ಡೆ, ಹುತ್ರಿ ಗೆಣಸು ಮುಂತಾದ ಬೆಳೆಯನ್ನು ಬೆಳೆಯುತ್ತಿದ್ದ. ಭತ್ತ, ಕಾಫಿ ಮತ್ತು ಏಲಕ್ಕಿ ಮುಖ್ಯ ಬೆಳೆಯಾಗಿತ್ತು. ಕೈಗೆ ಬಂದ ತುತ್ತು ಬಾಯಿಗೆ ಬರುವಷ್ಟರಲ್ಲಿ ಕಾಡು ಪ್ರಾಣಿಗಳು ಬೆಳೆಯನ್ನು ತಿಂದು ಸೂರೆ ಮಾಡುತ್ತಿದ್ದವು. ಕಾಡುಹಂದಿಗಳದ್ದೇ ಹಿಂಸೆ ಹೆಚ್ಚಾಗಿತ್ತು. ಅವುಗಳನ್ನು ಕೊಲ್ಲಬೇಕೆಂದು ಅಪ್ಪಿ ನಾನಾ ರೀತಿ ಪ್ರಯತ್ನ ಪಡುತ್ತಿದ್ದ.

ಹಂದಿ ಹೊಡೆಯಲು ತೋಟದಲ್ಲಿ ಒಳಿ ಕುಳಿತ. ಇವನು ಒಳಿ ಕುಳಿತ ದಿನ ಹಂದಿ ಬರುತ್ತಿರಲಿಲ್ಲ. ಬಂದರೂ ಮತ್ತೊಂದು ಕಡೆಯಿಂದ ನುಗ್ಗಿ ತಿಂದು ಹೋಗುತ್ತಿತ್ತು. ಇದಕ್ಕೆ ಬುದ್ಧಿ ಕಲಿಸುತ್ತೇನೆಂದು ಒಮ್ಮೆ ಕೋವಿ ಕಟ್ಟಿದ. ಆ ದಿನ ಹಂದಿ ಬಂದಿತ್ತಾದರೂ ಒಳನುಗ್ಗದೆ ನಿಂತುನೋಡಿ ಹಿಂತಿರುಗಿತ್ತು. ಒಂದೆರಡು ರಾತ್ರಿ ಅಪ್ಪಿ ಅದೆ ರೀತಿ ಪ್ರಯತ್ನಿಸಿ ಸೋತ. ಇನ್ನೊಮ್ಮೆ ಉರುಳು ಕಟ್ಟುವ ಯೋಚನೆ ಬಂತು. ಇಳಿಜಾರಿನಲ್ಲಿದ್ದ ತೋಟದ ಬೇಲಿಯ ಕಂಡಿಗಳನ್ನು ಮುಚ್ಚಿ ಒಂದು ಕಂಡಿಯನ್ನು ಮಾತ್ರ ಬಿಟ್ಟ. ಹಂದಿಗೆ ಇದೊಂದೇ ದಾರಿಯಾಯಿತು. ಆ ಕಂಡಿಯಲ್ಲಿ ಚೂಡಿ ಹಗ್ಗದ ಒಂದು ಉರುಳನ್ನು ಕಟ್ಟಿದ. ರಾತ್ರಿ ಸವಾರಿಗೆ ಹೊರಟ ಹಂದಿ ಗೆಣಸಿನಾಸೆಗೆ ತೋಟಕ್ಕೆ ಜಿಗಿಯಿತು. ಉರುಳು ಹಂದಿಯ ಕುತ್ತಿಗೆಗೆ ಸಿಕ್ಕಿಕೊಂಡಿತು. 'ಕಿರಿಂಯ್ಯೋ ಕಿರಿಂಯ್ಯೋ' ಎಂದು ಕಿರುಚಾಡಿಕೊಳ್ಳುವ ಹಂದಿಯ ಕಿರುಚಾಟ ಅಪ್ಪಿಗೆ ಕೇಳಲು ಅವನು ದಡಬಡನೆ ಎದ್ದ. ಅದಾಗ ಚಂದ್ರ ಕಂತುವ ಹೊತ್ತು. ಅಪ್ಪಿ ಕತ್ತಿ, ಕೋವಿಯೊಡನೆ ತೋಟದತ್ತ ಓಡಿದ. ಅಲ್ಲಿ ಹಂದಿ ಉರುಳಲ್ಲಿ ನೇತಾಡುತ್ತಿತ್ತು! ಅದರ ಕಾಲು ನೆಲಕ್ಕೆ ಮುಟ್ಟುತ್ತಿದ್ದುದರಿಂದ ಆಗಾಗ ನೆಲಕ್ಕೆ ಒದ್ದುಕೊಳ್ಳುತ್ತ ಉರುಳನ್ನು ಎಳೆದಾಡುತ್ತಿತ್ತು. ಈಗ ಅಪ್ಪಿಗೆ ನಾನಾ ಯೋಚನೆ ಶುರುವಾಯಿತು. ನಿನಗೆ ಸರಿಯಾದ ಗತಿ ತೋರಿಸುತ್ತೇನೆಂದು ಕೊಳ್ಳುತ್ತ ಅದನ್ನು ಕೂಡಲೆ ಗುಂಡು ಹೊಡೆದು ಕೊಲ್ಲುವ ಬದಲು ದೊಣ್ಣೆಯಿಂದ ಬಡಿಯ ತೊಡಗಿದ. "ನನ್ನ ಒಂದು ಗಾಡಿ ಗೆಣಸು ತಿಂದೆಲ್ಲಾ ಸಾಯಿ ಸಾಯಿ" ಎನ್ನುತ್ತ ಬಡಿಯುತ್ತಲೇ ಇದ್ದ. ಹಂದಿ ಅತ್ತಿತ್ತಾ ಒಚ್ಚಾಡುತ್ತಾ ಕಿರುಚುತ್ತಲೇ ಇತ್ತು. ಹಂದಿ ಸಾಯಲೂ ಇಲ್ಲ, ಇವನ ಹೊಡೆತ ನಿಲ್ಲಲೂ ಇಲ್ಲ. ಹೊಡೆದು ಹೊಡೆದು ಸುಸ್ತಾದ. ಆದರೂ ಗುಂಡು ಹೊಡೆಯಲು ಮನಸ್ಸಾಗದೆ ಕತ್ತಿ ಹಿಡಿದು ಕಡಿಯಲು ಹೋದ. ತನ್ನೆಲ್ಲಾ ಶಕ್ತಿಯನ್ನು ಕತ್ತಿಯ ಮೇಲೆ ಬಿಟ್ಟು ಹಂದಿಯ ತಲೆಗೆ ಕಡಿದ. ಒಚ್ಚುತ್ತಿದ್ದ ಹಂದಿಯ ತಲೆಗೆ ಕತ್ತಿ ಏಟು ಬೀಳದೆ ಅಕಸ್ಮಾತ್ ನೇಣು ಹಾಕಿದ ಹಗ್ಗಕ್ಕೆ ಬಡಿಯಿತು. ಹಗ್ಗ ತುಂಡಾಯಿತು. ಹಂದಿ ಓಡತೊಡಗಿತು. 'ಅಯ್ಯೋ ಗ್ರಾಚಾರವೆ' ಎನ್ನುತ್ತ ಕತ್ತಿ ಎಸೆದು ಕೋವಿ ಎತ್ತಿಕೊಂಡ. ಹಂದಿ ತೋಡು ಇಳಿದು ಆಚೆ ನೆಗೆದು ಓಡ ತೊಡಗಿತು. ಹಂದಿ ಓಡಿದತ್ತ ಗುಂಡು ಹಾರಿಸಿದ. ಗುಂಡು ಬಂಡೆಯೊಂದಕ್ಕೆ ಬಡಿದಿತ್ತು. 'ಕಡಿಚದೂ ಇಲ್ಲೆ, ಪುಡಿಚದೂ ಇಲ್ಲೆ' ಎಂದುಕೊಂಡು ಬೆಪ್ಪನಂತಾದ.

ಇದಾಗಿ ವಾರ ಕಳೆದಿರಬಹುದು. ಹಂದಿಗಳು ಮತ್ತೆ ಹಾಜರ್. "ಉಂಡೆ" ಇಟ್ಟೇ ಕೊಲ್ಲುತ್ತೇನೆಂದು ಉಂಡೆಯಿಟ್ಟ. ಆ ರಾತ್ರಿ ಉಂಡೆ ಸಿಡಿಯಿತು. ಸದ್ಯ ಹಂದಿಯ 'ದೊಂಡೆ ಕಟ್ಟಿತಲ್ಲ' ಅನ್ನುತ್ತ ಬಂದು ನೋಡಿದರೆ ನೆರೆಮನೆಯ ನಾಯಿ ಸತ್ತಿತ್ತು! ಇಷ್ಟೆಲ್ಲಾ ಆದರೂ ಕಾಡು ಹಂದಿಗಳು ತೋಟದ ಒಂದೆಡೆ ಲೂಟಿ ಮಾಡುತ್ತಿದ್ದರೆ ಮತ್ತೊಂದು ಕಡೆಯಿಂದ ಮುಳ್ಳು ಹಂದಿಗಳೂ ರಂಪ ಮಾಡತೊಡಗಿದವು.

ಒಮ್ಮೆ ಅಪ್ಪಿ ನಾಯಿಗಳನ್ನು ಚೂ ಬಿಡುತ್ತ ದೂರದ ಗುಡ್ಡದತ್ತ ಹೊರಟ. ನಾಯಿಗಳು ಅಲ್ಲಿ ಇಲ್ಲಿ ಸುತ್ತಾಡಿ ಬಂದು ಬಿಲವನ್ನು ನೋಡಿ ಆ ಬಿಲವನ್ನು ಮೂಸಿ ನೋಡುತ್ತ ಬೊಗುಳ ತೊಡಗಿದವು. ಅಪ್ಪಿ ತಗ್ಗಿ ಬಗ್ಗಿ ಅತ್ತ ಓಡಿದ. ಮಗುವಿನ ಹೆಜ್ಜೆ ಗುರುತನ್ನು ಹೋಲುವ ಹೆಜ್ಜೆ ಗುರುತುಗಳು ಕಣ್ಣಿಗೆ ಬಿದ್ದವು. ಮುಳ್ಳು ಹಂದಿಗಳು ಆ ಬಿಲದಲ್ಲಿರುವುದನ್ನು ತಿಳಿದು ಕೂಡಲೆ ಮನೆಯತ್ತ ಓಡಿದ. ಕಾಫಿ ತೋಟದಲ್ಲಿ ಹೆರ್ತೆ ಮಾಡುತ್ತಿದ್ದ ಗಪ್ಪುವಿನೊಡನೆ ಮುಳ್ಳು ಹಂದಿಯ ಬಿಲದ ಕುರಿತು ಹೇಳಿದ. ಅವನಿಗೂ ಅದೇ ಬೇಕಿತ್ತು. ಕೆಲಸ ನಿಲ್ಲಿಸಿ ಅಪ್ಪಿಯ ಮಾತಿಗೆ 'ಸೈ' ಎಂದ. ನೇಗಿಲು ಕೆತ್ತುತ್ತಿದ್ದ ರಮೇಶನೂ ಇವರೊಡನೆ ಸೇರಿಕೊಂಡ. ಕೆಂಪು ಒಣಮೆಣಸನ್ನು ಕಟ್ಟಿಕೊಂಡು, ಗುದ್ದಲಿ, ಹಾರೆಗಳೊಡನೆ ಕಾಡಿನತ್ತ ಹೊರಟರು. ಬೇಡ ಬೇಡವೆಂದರೂ ಕಿಟ್ಟು ಎಂಬ ಹುಡುಗನು ಜೊತೆಯಾದ. ಎಲ್ಲರೂ ಬಿಲವನ್ನು ತಲುಪಿದರು. ದರಗು, ಕಡ್ಡಿಗಳನ್ನು ತಂದು ಬಿಲಕ್ಕೆ ತುಂಬಿಸುವ ಕೆಲಸ ಕಿಟ್ಟುವಿನದಾಯಿತು. ಉಳಿದವರು ಮೆಣಸನ್ನು ಮಿಶ್ರ ಮಾಡಿ ಬಿಲಕ್ಕೆ ತುಂಬಿ ದೊಣ್ಣೆಯಿಂದ ಒಳತಳ್ಳಿದರು. ದರಗಿಗೆ ಬೆಂಕಿಯಿಟ್ಟರು. ಬಿಲದ ಬಾಯಲ್ಲಿ ಇಬ್ಬರು ದೊಣ್ಣೆ ಹಿಡಿದು ನಿಂತುಕೊಂಡರು. ಉರಿ ಹೆಚ್ಚಾಗುತ್ತಾ ಹೊಗೆ ಮೇಲೇಳುತ್ತಿರಲು ಮೆಣಸಿನ ಘಾಟು ಕೆಮ್ಮುವಂತೆ ಮಾಡಿತು. ಅಷ್ಟರಲ್ಲಿ ಬೆಂಗಿ-ಹೊಗೆಯನ್ನು ಭೇದಿಸಿಕೊಂಡು ಒಂದು ಹಂದಿ ಹೊರ ಜಿಗಿಯಿತು. ಇಬ್ಬರು ಗಡಿಬಿಡಿಯಿಂದ ಹೊಡೆದರು. ದೊಣ್ಣೆಗೆ ದೊಣ್ಣೆ ಬಡಿಯಿತು. ಹಂದಿ ತಪ್ಪಿಸಿಕೊಂಡಿತು. ಸಾಮಾನ್ಯವಾಗಿ ಒಂದು ಬಿಲದಲ್ಲಿ ಹಲವಾರು ಹಂದಿಗಳು ಇರುತ್ತಿದ್ದ ವಿಚಾರ ಇವರಿಗೆ ಗೊತ್ತಿತ್ತು. ಆದ್ದರಿಂದ ಈ ಬೀಲದಲ್ಲೂ ಇನ್ನೂ ಹಂದಿಗಳು ಇರಬಹುದೆಂದು ಭಾವಿಸಿ ಬಿಲವನ್ನು ಅಗೆದರು. ಅದರೇನು? ಅಗೆದುದೇ ಲಾಭ!

ಇದಾಗಿ ತಿಂಗಳೇ ಕಳೆದಿರಬಹುದು. ಅಪ್ಪಿ ತನ್ನ ಸಂಗಡಿಗರೊಡನೆ ಕಾಡಿನಲ್ಲಿ ಅಲೆದಾಡುತ್ತಿದ್ದಾಗ ಅಲ್ಲೂ ಒಂದು ಬಿಲ ಕಂಡಿತು. ದರಗು ಕಡ್ಡಿ ಗಿಡ್ಡಿ ತಂದು ಬಿಲಕ್ಕೆ ತುಂಬಿ ಬೆಂಕಿ ಯಿಟ್ಟರು. ಮೊದಲ ಸಾರಿ ಬಿಲದಿಂದ ಹೊರ ಜಿಗಿದು ಮುಳ್ಳು

ಮರಣಕ್ಕೆ ಮಾಡಿದ ಶೃಂಗಾರವಿಲ್ಲ, ಮನುಷ್ಯನಿಗೆ ಮಾಡಿದ ಉಪಕಾರವಿಲ್ಲ

ಹಂದಿ ತಪ್ಪಿಸಿಕೊಂಡಂತೆ ಇವತ್ತು ಆಗಬಾರದೆಂದು ಬಿಲದ ಬಾಯಿಗೆ ದಪ್ಪ ಕಲ್ಲನ್ನು ಅಡ್ಡ ಇಟ್ಟರು. ಬೆಂಕಿ ಹೆಚ್ಚಾದಂತೆ ಅಡ್ಡ ಇರಿಸಿದ ಕಲ್ಲು ಅಲುಗಿದಂತಾಯಿತು. ಸ್ವಲ್ಪ ಹೊತ್ತು ಬಿಟ್ಟು ಆ ಕಲ್ಲನ್ನು ಸರಿಸಿ ನೋಡಿದರು. ಎರಡು ಹಂದಿಗಳು ಒಂದರ ಮೇಲೊಂದು ಬಿದ್ದು ಸತ್ತಿದ್ದವು.

ಮೇ ತಿಂಗಳಲ್ಲಿ ಮುಂಗಾರು ಮಳೆ ನಾಲ್ಕಾರು ಬಾರಿ ಆಗಿತ್ತು. ನೆಲ ತಂಪಾದಂಥ ಕಾಲ. ತಪ್ಪಲಿನತ್ತ ಅಪ್ಪಿಯ ಬಳಗ ಬೇಟೆಗೆ ಹೊರಟಿತು. ಕಾಡಾನೆಗಳು ನಡೆದಾಡಿದ ಹೆಜ್ಜೆ ಮೂಡಿತ್ತು. ಒಂದು ಕಾಲು ಊನವಾಗಿದ್ದ ಆನೆ ಜಾರಿಸಿ ಜಾರಿಸಿ ಹೆಜ್ಜೆ ಹಾಕಿದ್ದು ಕಂಡಿತ್ತು. ಹಂದಿಗಳು ಕೆಸರು ಮೈಯನ್ನು ಮರಕ್ಕೆ ಉಜ್ಜಿ ಸಾಗಿದ್ದವು. ಬೆತ್ತದ ಮೆಳೆಯ ಆಚೆ ಒಂದು ಹೆಬ್ಬಂಡೆ. ಅದರ ಪಕ್ಕದಲ್ಲಿ ಸಣ್ಣದಾಗಿ ಸವೆದ ದಾರಿ. ಆ ದಾರಿ ಒಂದು ಬರೆಯ ಕಡೆ ಸಾಗಿದ್ದು ಕಂಡಿತು. ಆ ದಾರಿಯಲ್ಲೇ ನಡೆದು ಮುಂದೆ ಹೋಗಲು ಬರೆಯ ಬುಡದಲ್ಲೊಂದು ಬಿಲ. ಅದು ಮುಳ್ಳು ಹಂದಿಗಳ ಮನೆ! ಈ ಹಂದಿಗಳನ್ನು ಹಿಡಿಯಬೇಕೆಂದು ಅಪ್ಪಿಯ ಸೇನೆ ಚುರುಕಾಯಿತು. ಮಳೆ ಬಿದ್ದುದರಿಂದ ನೆಲವೆಲ್ಲ ಹಸಿ. ದರಗು ಇಲ್ಲದ್ದರಿಂದ ಬಿಲಕ್ಕೆ ಬೆಂಕಿ ಹಾಕುವ ಕೆಲಸ ಆಗದು. ಆದ್ದರಿಂದ ಬಿಲವನ್ನು ಅಗೆಯುವುದೇ ಸರಿ ಎಂದು ಅಗೆಯತೊಡಗಿದರು. ಆ ಬಿಲವೋ ಅತ್ತ ಇತ್ತ ತಿರುಗಿ ತಿರುಗಿ ಸಾಗಿತ್ತು. ಹತ್ತಾರು ಅಡಿ ಅಗೆದು ಸುಸ್ತಾದರು. ಮುಳ್ಳು ಹಂದಿಗಳು ಇರುವುದು ಖಚಿತ. ಏಕೆಂದರೆ ಬಿಲದೊಳಗಿಂದ ಹಂದಿಗಳ ವಾಸನೆ ಬರುತ್ತಿತ್ತು. ವಾಸನೆ ಬಂದಂತೆ ಆಯಾಸವೂ ಇಲ್ಲದಾಗಿ ಅಗೆತವನ್ನು ಮುಂದುವರಿಸಿದರು. ಅಪ್ಪಿ ಕೋವಿ ಹಿಡಿದು ನಿಂತಿದ್ದ. ಹೀಗೆ ಅಗೆಯುತ್ತಿರಲು ಒತ್ತೊತ್ತಾಗಿ ಎರಡು ಹಂದಿಗಳು ಮಲಗಿದ್ದು ಕಂಡಿತು. ಹಂದಿಗಳು 'ಮಿಣಿ ಮಿಣಿ' ಕಣ್ಣು ಮಿಟುಕಿಸುತ್ತಿದ್ದವೇ ಹೊರತು ಓಡಲಿಲ್ಲ. ಅಪ್ಪಿಯ ಕೋವಿ ಕ್ಷಣದಲ್ಲಿ ಸಿಡಿಯಿತು, ಮತ್ತೊಂದು ಸಿಡಿಯಿತು. ಎರಡು ಹಂದಿಗಳೂ ಸತ್ತುಬಿದ್ದವು. ಹಂದಿಗಳನ್ನು ಹೊರಗೆಳೆದರು. ಇನ್ನೂ ಇರಬಹುದೆಂದು ಅಪ್ಪಿ ಅದನ್ನು ಎತ್ತಿಕೊಡ. ಆ ಮುದ್ದೆ ಬಿಸಿಯಾಗಿತ್ತು! ಅದು ಉಸಿರಾಡುತ್ತಿತ್ತು! ಮುಳ್ಳು ಹಂದಿಯ ಒಂದು ವಾರವಾಗಿರಬಹುದಾದ ಎಳೆಯ ಮರಿ!!

ಅಪ್ಪಿಯ ಹಿಡಿಯೊಳಗಿದ್ದ ಮರಿ ಒಮ್ಮೆ ಮಿಸುಕಾಡಿತು. ಅಲ್ಲೇ ಬಿಟ್ಟುಬಿಡಲೆ ಅಥವಾ ಕೊಂದು ಎಸೆಯಲೆ ಎಂದು ಯೋಚಿಸಿದ.

"ಏ, ಅದೇನ್ ನೋಡ್ತಿಯಾ ಬಿಸಾಕು" ಅಂತ ಒಬ್ಬ ಹೇಳಿದ.

"ಸುಮ್ನೆ ಏನ್ ನೋಡ್ತಿಯ ಕೊಡಿಲ್ಲಿ, ಆ ಕಲ್ಲಿಗೆ ಗುರಿ ಹೊಡೆಯುತ್ತೆನೆ" ಅಂತ ಮತ್ತೊಬ್ಬ ಕೀಳಲು ಬಂದ. ಆದರೆ ಅಪ್ಪಿಗೆ ಏನನ್ನಿಸಿತೊ. 'ಎಸಿಯೋದೂ ಬೇಡ, ಕೊಲ್ಲೋದೂ ಬೇಡ ನಾ ಮನೇಗೆ ತಕ್ಕೊಂಡೋಗ್ತೇನೆ' ಅಂತ ಹೇಳಿ ಅಂಗಿಯನ್ನು ಕಳಚಿ ಆ ಬಟ್ಟೆಯೊಳಗೆ ಮರಿಯನ್ನು ಸುತ್ತಿಕೊಂಡು ಮನೆಗೊಯ್ದ.

ಮರಿಯನ್ನು ಸಾಕಲೇಬೇಕು. ಆದರೆ ಅದರ ಆಹಾರ ಕ್ರಮ ಹೇಗೆ? ಹಾಲು ಕೊಡೋಣವೆಂದರೆ ಮನೆಯಲ್ಲಿ ಹಾಲಿಲ್ಲ. ಅಂದೇ ಸಂಜೆ ಚೇರಂಬಾಣೆ ಅಂಗಡಿಗೆ ಓಡಿದ. ಫೆರಾಕ್ಸ್ ಡಬ್ಬಿಯನ್ನು ತಂದ. ಹಾಲು ಮಾಡಿದ. ಕುಡಿಸುವುದಾದರೂ ಹೇಗೆ? ಬಾಯಿ ಬಿಡಿಸಿ ಹಾಲು ಉಯ್ಯಲೆ? ಹಾಗೆ ಪ್ರಯತ್ನಿಸಿದ. ಆ ಎಳೆಯ ಮರಿಯ ಬಾಯನ್ನು ಬಿಡಿಸುವಾಗಲೆ ನೋವಿನಿಂದ ಅದು ಒದ್ದಾಡಿತು. ಛೇ ಇನ್ನೇನು ಮಾಡಲಿ ಎಂದು ಬಟ್ಟೆಯ ತುದಿಯನ್ನು ಹಾಲಿಗೆ ಅದ್ದಿದ. ಆ ತುದಿಯನ್ನು ಕಾಪಿ ಅದರ ಬಾಯಿಗೆ ಹಿಡಿದ. ಚೆನ್ನಾಗಿ ಚೀಪಿತು. ಒಲೆಯ ಮುಂದೆ ಗೋಣಿ ಹಾಸಿದ. ಅದರ ಮೇಲೆ ಮಲಗಿಸಿದ. ಮರಿ ಸುಮ್ಮನೆ ಮಲಗಿತು. ರಾತ್ರಿ ಮತ್ತೊಮ್ಮೆ ಹಾಲುಣ್ಣಿಸಿದ. ಒಂದು ವಾರ ಹೀಗೇ ಕಳೆಯಿತು. ಅದು ಹಾಲು ಕುಡಿಯುವುದನ್ನು ಹೆಚ್ಚು ಮಾಡಿತು. ಬತ್ತಿಯಿಂದ ಹಾಲು ಕೊಡುವುದಕ್ಕಿಂತ ನಿಪ್ಪಲೇ ಒಳ್ಳೆಯದೆಂದು ಒಂದು ನಿಪ್ಪಲನ್ನು ತಂದು ಬಾಟಲಿಯಿಂದ ಹಾಲು ಕೊಡಲು ಶುರು ಮಾಡಿದ. ಆಗ ಅದು ಚೆನ್ನಾಗಿ ಹೀರಿಕೊಳ್ಳಲು ತೊಡಗಿತ್ತು. ಇದರ ಜೊತೆಗೆ ಮರಿ ತುಂಟಾಟವನ್ನೂ ಶುರು ಮಾಡಿತು. ಬಾಯಿಗೆ ನಿಪ್ಪಲನ್ನು ಹಿಡಿದರೆ ಹಾಲು ಕುಡಿದು ನಿಪ್ಪನ್ನು ಕಚ್ಚಿ ಬಿಡುತ್ತಿತ್ತು. ಹಾಗಾಗಿ ಕೆಲವು ನಿಪ್ಪಲುಗಳು ಹಾಳಾದವು. ಹಲ್ಲು ಮೂಡಿದ ಮರಿಗೆ ನಿಪ್ಪಲಿನಿಂದ ಹಾಲು ನೀಡುವುದರ ಬದಲಾಗಿ ಪಾತ್ರೆಯಲ್ಲಿ ಹಾಲಿಡುತ್ತಿದ್ದ. ಆಗ ಅದು ಹಾಲನ್ನು ನೆಕ್ಕುತಿತ್ತು. ದಿನಗಳು ಕಳೆದಂತೆ ಅದರ ಮೈಮೇಲೆ ಒಂದೊಂದು ಮುಳ್ಳುಗಳು ಮೂಡ ತೊಡಗಿದವು. ಮನೆಯೊಳಗೆಲ್ಲಾ ಓಡಾಡುತ್ತಾ ಸಿಕ್ಕಿದ್ದನ್ನೆಲ್ಲಾ ನಾಯಿ ಮರಿಯಂತೆ ಕಚ್ಚಿ ಹಾಕುತ್ತಿತ್ತು. ಬಿದಿರ ಬರ್ಜಿಯಲ್ಲಿ ಮುಚ್ಚಿದರೆ ಅದನ್ನು ಕಚ್ಚಿ ಚೆಲ್ಲಾಟವಾಡುತ್ತಿತ್ತು. ನಂತರ ಒಂದು ಬೋನನ್ನೂ ತಂದದ್ದಾಯಿತು. ಅದರಲ್ಲಿ ಕೂಡಿ ಹಾಕಿದ ಒಂದೆರಡು ದಿನಗಳಲ್ಲಿ ಅದಕ್ಕೂ ಹಲ್ಲಿನ ರುಚಿ ತೋರಿಸಿ ಹಾಳು ಮಾಡಿತು.

ಸುಮಾರು ಒಂದೆರಡು ತಿಂಗಳು ಕಳೆದ ಬಳಿಕ ಮನೆಯವರೆಲ್ಲ ಆ ಮರಿಗೆ ' ಕುಕ್ಕಾ' ಎಂದು ಹೆಸರಿಟ್ಟರು. ' ಕುಕ್ಕಾ, ಓ ಕುಕ್ಕಾ' ಎಂದು ಕರೆದರೆ ಅದು ಎಲ್ಲಿದ್ದರೂ 'ಹುಂ ಹುಂ' ಎನ್ನುತ್ತ ಓಡಿ ಬರತೊಡಗಿತು. ಮನೆಯವರು ತಿನ್ನುವ ಎಲ್ಲಾ ಆಹಾರವನ್ನು ತಿನ್ನುತ್ತ ಈಗ ಮನೆಯವರಂತೆ ಆಯಿತು. ಆಗ ಅಪ್ಪಿಯ ಮೂವರು ಮಕ್ಕಳೊಡನೆ ಆಟವಾಡುತ್ತದೆ. ಮಕ್ಕಳು ಆಟವಾಡುತ್ತ ಓಡಿ ಮಂಚವನ್ನೇರಿದರೆ ಇದೂ ಹಾಗೇ ಮಾಡುತ್ತದೆ. ಹಾಸಿಗೆಯ ಮೇಲೆ ಬಿದ್ದು ಹೊರಳಾಡುತ್ತದೆ. ಕುರ್ಚಿ, ಬೆಂಚು, ಮೇಜು ಎಲ್ಲವೂ ಅದಕ್ಕೆ ಆಟದ ಸ್ಥಳಗಳೇ. ವಾರದಲ್ಲಿ ಒಂದೆರಡು ಬಾರಿ ಸ್ನಾನವೂ ಉಂಟು. ಸ್ನಾನ ಮಾಡಿಸಿದಾಕ್ಷಣ ಹೊರಗೆ ಓಡಿಬಂದು ಪುಡಿ ಮಣ್ಣಿನಲ್ಲಿ ಬಿದ್ದು ಹೊರಳಾಡಿ ಮೈಯೆಲ್ಲಾ ಮಣ್ಣು ಮಾಡಿಕೊಳ್ಳುತ್ತದೆ. ನಾಯಿಗಳು ಬೊಗಳುತ್ತಾ ಇದರತ್ತ ಬಂದರೆ ಇದು ಅವುಗಳತ್ತಲೇ ಓಡುತ್ತದೆ. ನಾಯಿಗಳು ಹೆದರಿ ಓಡುತ್ತವೆ. ಮಳೆ ಬಂದ ರಾತ್ರಿ ಇದರದೇ ಸಂಭ್ರಮ! ಮುಳ್ಳುಗಳನ್ನು ಕೆದರಿಕೊಳ್ಳುತ್ತ ಪುಟಪುಟನೆ ಚೆಂಡಿನಂತೆ ನೆಗೆದಾಡಿ ಬೊಬ್ಬೆ ಹಾಕುತ್ತ ಮನೆಯ ಸುತ್ತೆಲ್ಲಾ ಓಡಾಡುತ್ತದೆ.

ಮುದ್ದೂ ಮುದ್ದೂ ಹದ್ದು ಮೀರಿದರೆ ವಿಷ

ಅಪ್ಪಿಯ ಮನೆಯವರಿಗೆ ಇದರ ಆಟ ಸುಂದರ ನೋಟ. 'ಬಾರೇ ಬಾರೇ ಕುಕ್ಕಾ, ಬಾಮ್ಮ ಏಯ್ ಬಾರೆ ಹೊಲ್ಸು ಬಾಮ್ಮ' ಎನ್ನುತ್ತ ಅದನ್ನು ಪ್ರೀತಿಯಿಂದ ಕರೆಯುತ್ತಾರೆ. ಅಪ್ಪಿಯ ಹೆಂಡತಿ ಖಾರ ರುಬ್ಬುವಾಗ ಇದು ಆಕೆಯ ಮಡಿಲಲ್ಲಿ ಮಲಗುತ್ತದೆ. "ತುಂಟಿಗೆ ತೆಂಗಿನಕಾಯಿ ಬೇಕಾ? ಹುಂ ತಕ್ಕೊ" ಅನ್ನುತ್ತ ಕೊಟ್ಟರೆ ಅದು ಕಾಯಿ ಚೂರನ್ನು ತಿನ್ನುತ್ತ ಮೆಲ್ಲನೆ ಇಳಿದು ಹೋಗುತ್ತದೆ.

ಹಗಲು ನಿದ್ರಿಸುವ ಇದು ರಾತ್ರಿ ಬಹು ಜಾಗೃತೆಯಲ್ಲಿರುತ್ತದೆ. "ಕ್ಕೂಕ್ಕೂ" ಎನ್ನುವ ಇದರ ಕೂಗು ಬೆಟ್ಟಗುಡ್ಡಗಳಲ್ಲಿ ಪ್ರತಿಧ್ವನಿಯಾಗುತ್ತದೆ. ರಾತ್ರಿ ಹೊತ್ತಲ್ಲಿ ಯಾರಾದರೂ ಅಪರಿಚಿತರು ಮನೆಯತ್ತ ಬಂದರೆ "ಗೊಗ್" ಎಂದು ಸದ್ದು ಮಾಡಿ ನೆಲಕ್ಕೆ ಒದ್ದು ಬಾಯಿ ಚಪ್ಪರಿಸುತ್ತದೆ. ಒಮ್ಮೆ ಅಂಗಳದಲ್ಲಿ ಕಾಫಿ ಒಣಗಿಸಲು ಹರಡಿದ್ದರು. ಕಾಫಿ ರಾತ್ರಿಯೂ ಅಲ್ಲೇ ಇತ್ತು. ಯಾರದೋ ನಡಿಗೆಯ ಸದ್ದು ಕುಕ್ಕಾಳನ್ನು ಎಚ್ಚರಿಸಿತು. ಕೂಡಲೆ ಇದು ಮನೆಯವರಿಗೆ ಎಚ್ಚರಿಕೆಯನ್ನು ನೀಡಿತು. ಮನೆಯವರು ಹೊರಗೆ ಬಂದು ನೋಡುವಷ್ಟರಲ್ಲಿ ಕಳ್ಳರು !

ಈಗ ಪ್ರಾಯಕ್ಕೆ ಬಂದ ಕುಕ್ಕಾಳಿಗೆ ವಿರಹ ವೇದನೆ ಕಾಡತೊಡಗಿತು. ಒಮ್ಮೆ ಮನೆಯ ಹೊರಗಿನ ಗೂಡಿನಲ್ಲಿ ಇವಳನ್ನು ಕೂಡಿ ಹಾಕಿದ್ದರು. ಎಲ್ಲರೂ ತೋಟಕ್ಕೆ ಹೋಗಿದ್ದ ದಿನ. ಈಕೆಯ ಗೂಡಿನ ಪಕ್ಕದಲ್ಲಿ ನಾಯಿಯನ್ನು ಕಟ್ಟಿದ್ದರು. ಇವಳು ನಾಯಿಯ ಸರಪಳಿಯನ್ನು ಕಚ್ಚಿ ಹಿಡಿದು ಗೂಡಿನೊಳಗೆ ಎಳೆದಳು. ಮತ್ತೂ ಎಳೆದಳು. ಎಷ್ಟೇ ಎಳೆದರೂ ನಾಯಿ ಗೂಡಿನೊಳಗೆ ಬರಲು ಸಾಧ್ಯವೇ ಇಲ್ಲ. ಆದರೀಕೆ ಕಚ್ಚಿದ ಹಿಡಿತವನ್ನು ಬಿಡದೆ ಮತ್ತೆ ಮತ್ತೆ ಎಳೆದಳು. ಹೀಗೆ ಎಳೆದೂ ಎಳೆದೂ ತನ್ನ ಗೂಡಿಗೆ ಅಂಟಿಸಿ ಬಿಟ್ಟಳು. ನಾಯಿ ಒಂದೆರಡು ಬಾರಿ "ಕಂಯ್ಯೋ ಕಂಯ್ಯೋ" ಅಂದಿತು. ತೋಟಕ್ಕೆ ಹೋದವರಿಗೆ ನಾಯಿಯ ಕೂಗಾಟ ಕೇಳಿ ಓಡಿ ಬಂದರು. 'ಕುಕ್ಕಾ, ಕುಕ್ಕಾ' ಎನ್ನುತ್ತ ಗೂಡಿನ ಸಮೀಪ ಬಂದರು. 'ಬುಡು ಕುಕ್ಕಾ ಬುಡು' ಎಂದು ಬಯ್ದರು. ಆಗ ಕಚ್ಚಿದ ಹಿಡಿತವನ್ನು ಬಿಟ್ಟಳು. ಸರಪಳಿ ತುಂಡು ತುಂಡಾಗಿತ್ತು. ಉಸಿರು ಕಟ್ಟಿ ನಾಯಿ ಸತ್ತೇ ಹೋಗಿದೆ! ಇದಾದ ಬಳಿಕ ಈಕೆಯ ಜೊತೆಗಾರನಾಗಿ ಕೋಳಿಯೊಂದು ವಾಸಿಸುತ್ತಿತ್ತು. ಒಂದೆರಡು ತಿಂಗಳು ಅವೆರಡು ಜೊತೆಯಾಗಿದ್ದವು. ಕೋಳಿಯು ಕುರ್ಕನ (ಗುಳ್ಳೆನರಿ) ಪಾಲಾದ ಬಳಿಕ ಈಕೆ ಏಕಾಂಗಿಯಾದಳು.

ಅಪ್ಪಿ ಇದನ್ನು ಎಷ್ಟೇ ಪ್ರೀತಿಯಿಂದ ಸಾಕಿದರೂ ಮನದಲ್ಲಿ ದುಃಖ ತುಂಬಿಕೊಂಡಿದೆ. ಇದರ ತಂದೆ ತಾಯಿಯರನ್ನು ಕೊಂದವನು ತಾನೆಂದು ಅಪ್ಪಿ ಪದೇ ಪದೇ ಯೋಚಿಸುವನು. ತಾನು ಅದರ ಮೇಲೆ ಎಷ್ಟೇ ಪ್ರೀತಿಯನ್ನು ತೋರಿದರೂ ಅದರ ತಂದೆ ತಾಯ್ಗಳು ತೋರುವ ಪ್ರೀತಿಯನ್ನು ತೋರಲಾಗದು. ಆ ಚಿಂತೆಯಲ್ಲೇ ಅಪ್ಪಿ ಅಂದಿನಿಂದ ಇಂದಿನವರೆಗೂ ಇನ್ನೊಂದರ ಜೀವ ತೆಗೆಯಲೆಂದು ಕೋವಿಯೆತ್ತಲಿಲ್ಲ!

ಒಮ್ಮೆ ರಾತ್ರಿ ಅದಕ್ಕೆ ಊಟ ಹಾಕಲು ಸ್ವಲ್ಪ ತಡವಾಯಿತು. ವಿಪರೀತ ಬೊಬ್ಬೆ ಶುರುಮಾಡಿತು. ಊಟ ಹಾಕಿದರು. ಊಟ ಹಾಕಿದ ಸ್ವಲ್ಪ ಹೊತ್ತಿನಲ್ಲಿ ಕುಕ್ಕಾ ನಾಪತ್ತೆ! ಅರೆ! ಎಂದೂ ಹೀಗೆ ಕಾಣೆಯಾದುದೇ ಇಲ್ಲ. ಏನಾಯಿತು? ಎಲ್ಲಿ ಹೋಯಿತೆಂದು ಅಪ್ಪಿ ಗಾಬರಿಯಾದ. ಎಷ್ಟೇ ಕರೆದರೂ ಕುಕ್ಕಾ ಬರಲಿಲ್ಲ. ಒಂದು ರಾತ್ರಿ ಕಳೆಯಿತು. ಇನ್ನೊಂದು ರಾತ್ರಿ ಕಳೆಯಿತು. ಕುಕ್ಕಾ ಬರಲೇ ಇಲ್ಲ. ಹುಡುಕಾಡಿದರು. ಕಾಡಿನಲ್ಲಿ ದಾರಿ ತಿಳಿಯದೆಯೋ, ಬೇಟೆಗಾರರ ಗುಂಡಿಗೋ ಅಥವಾ ಇನ್ನೇನಾಗಿಯೋ ಕಣ್ಮರೆಯಾಯಿತೆಂದು ಚಿಂತಿಸಿದರು.

ಹುಡುಕುತ್ತಾ ಹೋದಂತೆ ದೂರದಲ್ಲೊಂದು ಬಿಲ ಕಂಡಿತು. ಅಲ್ಲಿ ಇರಬಹುದಾ? ನೋಡೋಣವೆಂದು ಆ ಬಿಲದ ಬಳಿ ಹೋದ. 'ಕುಕ್ಕಾ ಓ ಕುಕ್ಕಾ" ಎಂದು ಕೂಗಿದ. ಆ ಕೂಗಿಗೆ 'ಹುಂ' ಗುಟ್ಟಿ ಓಡಿಬಂದಿತು. ಅಪ್ಪಿಯ ಜೊತೆ ಕುಣುಕುಣು ನಡೆದು ಮನೆ ಸೇರಿತು.

ಇದಾಗಿ ತಿಂಗಳೇ ಕಳೆದಿರಬಹುದು. ಮತ್ತೊಮ್ಮೆ ತಪ್ಪಿಸಿಕೊಂಡಿತು. ರಾತ್ರಿ ಬೇಟೆಯಾಡಲು ಹೊರಟ ಯಾವನೋ ಒಬ್ಬ ಬೇಟೆಗಾರನ ಟಾರ್ಚ್ ಬೆಳಕಿನಲ್ಲಿ ಕುಕ್ಕಾ ನಿಂತಿದೆ. ಇನ್ನೇನು ಗುಂಡು ಸಿಡಿಯಬೇಕೆನ್ನುವಷ್ಟರಲ್ಲಿ ಕುಕ್ಕಾ ರುಮ್ಮನೆ ಬೇಟೆಗಾರನತ್ತ ನುಗ್ಗಿತು. ಹಾಗೆ ಜಿಗಿದ ರಭಸಕ್ಕೆ ಇದರ ಮುಳ್ಳು ಆ ಬೇಟೆಗಾರನ ಕಾಲಿನ ಗಂಟಿಗೆ ನಾಟಿಕೊಂಡಿತು. ಗಾಬರಿಯಿಂದಲೂ, ನೋವಿನಿಂದಲೂ ನರಳಿದ ಬೇಟೆಗಾರನ ಕೈಯಿಂದ ಕೋವಿ ಜಾರಿ ಬಿದ್ದಿತು. ಕುಕ್ಕಾಳನ್ನು ಹುಡುಕುತ್ತ ಹೊರಟಿದ್ದ ಅಪ್ಪಿ ಆಕಸ್ಮಿಕವಾಗಿ ಅದೇ ದಾರಿಯಲ್ಲಿ ಹೋಗುತ್ತಿದ್ದ. ಇದೇನೆಂದು ಅಪ್ಪಿ ಅತ್ತ ಓಡಿದ. ಕುಕ್ಕಾ ಅಲ್ಲಿದ್ದುದು ತಿಳಿದು "ಕುಕ್ಕಾ ಬಾರೇ ಕುಕ್ಕಾ ಬಾರೇ" ಎಂದಾಕ್ಷಣ ಧ್ವನಿಯ ಗುರುತು ಹಿಡಿದ ಕುಕ್ಕಾ ಓಡೋಡಿ ಬಂದು ಒಡೆಯನ ಬಳಿ ನಿಂತಿತು. ಮುಳ್ಳು ತಾಗಿಸಿಕೊಂಡ ಬೇಟೆಗಾರನ ರಿಪೇರಿಯ ಖರ್ಚು ಅಪ್ಪಿಯ ಪಾಲಿಗಾಯ್ತು. ಇನ್ನೊಬ್ಬನಿಗೆ ನೋವು ಮಾಡಿದ ಘಟನೆ ಇದೊಂದೇ. ರಂಗುರಂಗಿನ ಮುಳ್ಳನ್ನು ಬಾಣದಂತೆ ಅದು ಯಾರ ಮೇಲೆಯೂ ಎಸೆದಿರಲಿಲ್ಲ. ಮನೆಯ ಸದಸ್ಯನಂತೆ ಇದ್ದ ಹದಿಮೂರು ವರ್ಷದ ಕುಕ್ಕಾ ಸತ್ತಾಗ ಮಣ್ಣು ಮಾಡುವ, ಅದರ ನೆನಪಿಗಾಗಿ ಕೆಲವರಿಗಾದರೂ ಅನ್ನದಾನ ಮಾಡುವ ಚಿಂತನೆ ಮಾಡುವಾಗ ಅಪ್ಪಿಯ ಕಣ್ಣಿನ ಕೊನೆ ಹನಿಯಾಗುತ್ತದೆ.

---

**10ನೇ ಪುಟದಿಂದ**

ಅವುಕೆಲ್ಲಾ, ಕಾನೂನು ಪ್ರಕಾರದ ಹೆಚ್ಚಿನ ಮೂಲಭೂತ ಸೌಲತ್ತುಗಳನೆಲ್ಲಾ ಕೊಡಿಕಾದೆ ಇದರಿಂದಲೂ ಕೋಟ್ಯಾಂತರ ರೂಪಾಯಿ ಹಣ ಸುಮ್ಮನೆ ಸರಕಾರಕ್ಕೆ ದಂಡವಾಗಿ ಖರ್ಚಾದೆ, ಆದುದರಿಂಗ ಹಿಂಗೆ ಕೋಟ್ಯಾಂತರ ರೂಪಾಯಿಗಳ ಸರಕಾರಕ್ಕೆ ತಲಪಿಸುವ ಬದಲು ಸಾವಿರಾರು ರೂಪಾಯಿನ ಈ ಸರ್ಕಾರದ ಚಮಚಾಗಳಿಗೆ ಕೊಟ್ಟ್‌ಬುಟ್ಟರೆ ಮುಂದಕೆ ಯಾವ ತಾಪತ್ರೆನೂ ಇರ್ದುಲೆತ್ತೇಳುವಂತಹ ತೀರ್ಮಾನ ಈ ಸಾಹುಕಾರ ಕೃಷ್ಣಾವತಾರ ಸಿಂಗ್‌ದ್.

(ಮುಂದ್‌ವರ್ದದೆ)

ಕೊಡಗು ಸಂಗಾತಿ, ಪಾಕ್ಷಿಕನ್ನ ತಕ್ಕಂಡೊದಕು

---

ಅಂಡೆ ಬಾಯಿ ಮುಚ್ಚಬಹುದು. ದೊಂಡೆ ಬಾಯಿ ಮುಚ್ಚಲಾಗದು

# ಬೆಂಗಳೂರಿನಲ್ಲಿ ಮಿಲ್ಲೆನಿಯಂ 2000ದ ಮೊದಲ ಅದ್ದೂರಿ ಕೈಲ್ ಮುಹೂರ್ತ.

ಕೊಡಗಿನ ಜನರಿಗೆ 'ಕೈಲ್ ಮುಹೂರ್ತ" 2ನೇ ದೊಡ್ಡ ಹಬ್ಬ. ಕರ್ನಾಟಕದಾದ್ಯಂತ ಕೊಡಗಿನ ನಾನಾ ಸಂಸ್ಥೆ, ಸಮಾಜಗಳ ಪರವಾಗಿ ಸೆಪ್ಟೆಂಬರ್ ತಿಂಗಳ ಪೂರ್ತಿ ನಡೆಯುವ ಕೈಲ್‌ಮುಹೂರ್ತ ಹಬ್ಬದ ಸಂದರ್ಭದಿಂದಾಗಿ ಕೊಡಿಗಿನ ಜನರಿಗೆ ಮತ್ತೆ ಮತ್ತೆ ಕೊಡಗಿನ ಸ್ಪೆಶಲ್ ಬಾಯಲ್ಲಿ, ನೀರೂಡಿಸುವ ಬಟ್ಲೆಟ್ಟ್, ಕಡಂಬಿಟ್ಟು ತಿನ್ನುವ ಸುಯೋಗ.

ಸುಮಾರು 2500ಕ್ಕೂ ಮೀರಿದ ಜನಸ್ತೋಮ ಒಂದೆಡೆ ಸೇರಿ ಕೈಲ್‌ಮುಹೂರ್ತ ಆಚರಿಸಿದ ಘಟನೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕಿನಲ್ಲಿ ಸೆಪ್ಟೆಂಬರ್ 10ನೇ ತಾರೀಖು, ಭಾನುವಾರ ನಡೆಯಿತು. ಶ್ರೀ ಅಮ್ಮಾಜೀರ ಪೊನ್ನಪ್ಪನವರ ನೇತೃತ್ವದಲ್ಲಿ, ಕಾವೇರಿನಾಡು ಸಾಂಸ್ಕೃತಿಕ ಅಕಾಡಮಿಯ 5ನೇ ವರ್ಷದ ಕೈಲ್ ಮುಹೂರ್ತ ಹಬ್ಬ ಈ ಶತಮಾನದ ಮೊದಲ ಅದ್ದೂರಿ ಆಚರಣೆ ಎಂದರೆ ಅತಿಶಯವಾಗಲಾರದು.

ಬೆಂಗಳೂರಿನ ನಾನಾ ಮೂಲೆಗಳಿಂದ ಜನರನ್ನು ನೆಲಮಂಗಲದ ಕಾಡುಕರೇನಹಳ್ಳಿಗೆ ಒಯ್ಯಲು 6ಬಸ್ಸುಗಳನ್ನು ಏರ್ಪಡಿಸಲಾಗಿತ್ತು. ಇದಲ್ಲದೆ ನೂರಾರು ಖಾಸಗಿ ವಾಹನಗಳಲ್ಲಿ ಕೂಡ ಜನಸ್ಥೋಮ ಬಂದು ಸೇರಿತು. ಕೊಡಗು, ಮೈಸೂರು, ಮಂಡ್ಯದಿಂದ ಅನೇಕ ತಂಡಗಳು ಅಂದಿನ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ದಿನ ಮುಂದಾಗಿ ಬಂದು ಸೇರಿದ್ದರು. ಇವರಿಗೆ ಊಟೋಪಚಾರ, ವಸತಿ ಹಾಗೂ ಅಭ್ಯಾಸ ಮಾಡಿಕೊಳ್ಳಲು ಸೌಲಭ್ಯಗಳಿದ್ದವು. ಭಾನುವಾರ ಬೆಳಿಗ್ಗೆ ಜ್ಯೋತಿ ಬೆಳಗಿಸುವುದರ ಮೂಲಕ ಕಾರ್ಯಕ್ರಮವು ಶುಭಾರಂಭವಾಯಿತು. ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಅಧ್ಯಕ್ಷರಾದ ದಂಬೆಕೋಡಿ ಆನಂದ್‌ರವರು ಮುಖ್ಯ ಅತಿಥಿಯರಾಗಿ, ಮಡಿಕೇರಿಯ ಕೊಡಗು ಗೌತ ಸಾಂಸ್ಕೃತಿಕ ಅಕಾಡಮಿಯ ಅಧ್ಯಕ್ಷರಾದ ಶ್ರೀ ತುಮ್‌ತಜ್ಜೆ ಗಣೇಶ್‌ರವರು, ಮಡಿಕೇರಿಯ ಕೊಡಗು ಗೌಡ ಮಹಿಳಾ ಒಕ್ಕೂಟದ ಅಧ್ಯಕ್ಷೆಯಾದ ಶ್ರೀಮತಿ ಚಿಯಂಡಿ ರಾಧ ಯಾಧವ್‌ರವರು, ಡೆಪ್ಯೂಟಿ ರಿಜಿಸ್ಟ್ರಾರ್ (ಬೆಂಗಳೂರು) ಶ್ರೀ ಕೇಟೋಳಿರ ಯತೀಶ್‌ಕುಮಾರ್‌ರವರು, ಮೈಸೂರಿನಿಂದ ಕೊಡಗು ಸಂಗಾತಿ ದಂಪತಿಗಳು ಮತ್ತು ಕೊಡಗು ಗೌಡ ಮಾಜಿ ಸೈನಿಕರ ಕ್ಷೇಮಾಭಿವೃದ್ಧಿ ಸಂಘದ ಅಧ್ಯಕ್ಷರಾದ ಶ್ರೀ ತಡಿಯಪ್ಪನ ಕುಮಾರ ಜಯನವರು ಆಗಮಿಸಿದ್ದರು.

ರಾಜ್ಯದ ವಿವಿಧ ಭಾಗಗಳಿಂದ ಆಗಮಿಸಿದ್ದ ಸುಮಾರು 42 ತಂಡದವರಿಂದ ನಾನಾ ಸಾಂಸ್ಕೃತಿಕ ಕಾರ್ಯಕ್ರಮಗಳ ಸುರಿಮಳೆಯಾಯಿತು.

ಕಾರ್ಯಕ್ರಮ ನಡೆಸಿಕೊಟ್ಟವರಲ್ಲಿ ಕೆಳಗಿನ ತಂಡಗಳು ಮತ್ತು ಕಾರ್ಯಕ್ರಮಗಳು ಪ್ರಮುಖವಾದವು. **"ಕಾವೇರಿನಾಡು ಸಾಂಸ್ಕೃತಿಕ ಅಕಾಡೆಮಿ" ತಂಡ** - ಬೆಂಗಳೂರು

ಕೊಡಗುಗೌಡ ಮಾಜಿಸೈನಿಕರ ಕ್ಷೇಮಾಭಿವೃದ್ಧಿ ಸಂಘ, ಮೈಸೂರು

"ಕಾವೇರಿ ಮಹಿಳಾ ಸಮಾಜ"ದ ತಂಡ - ಕುಯ್ಯಂಗೇರಿ

"ಗೌಡ ಮಹಿಳಾ ಯುವತಿಯರ ಒಕ್ಕೂಟ" ಮಡಿಕೇರಿ

ಐಕೋಳ ಗ್ರಾಮದ ಕೊಂಪುಳೀರ ಗಣೇಶ್ ಬೋಪಯ್ಯನವರ ನೇತೃತ್ವದಲ್ಲಿ ಆಗಮಿಸಿದ್ದ "ಐಯ್ಯಪ್ಪ ಯುವಕ ಯುವತಿಯರ ತಂಡ"

ಐಯೇಟಿ ಸೋಮಯ್ಯನವರ ತಂಡ - ಯಲಹಂಕ, ಬೆಂಗಳೂರು.

ತಡಿಯಪ್ಪನ ಪುನೀತ್ ಸುಬ್ಬಯ್ಯನವರ ತಂಡ - ದೊಮ್ಮಲೂರು, ಬೆಂಗಳೂರು

**ಅನಿಲ್‌ಕುಮಾರ್ ಮತ್ತು ಸಂಗಡಿಗರ ಕೊಡೈಕಲ್ ತಂಡ**

**ಅಣ್ಣೇಚಿರ ಗಿರೀಶ್ ಮತ್ತು ಸಂಗಡಿಗರ " ಶಿವಶಕ್ತಿ ನಾಟ್ಯ ತಂಡ"** ಬೆಂಗಳೂರು

**ಕಾವೇರಿನಾಡು ಸಾಂಸ್ಕೃತಿಕ ಅಕಾಡೆಮಿಯ ಅಧ್ಯಾಪಕರ ವೃಂದದವರಿಂದ ನಾಟಕ**

**ಎಡಿಕೇರಿ ಸುಧರ್ಶನ್ ಮತ್ತು ಯಂಕನ (ಜಗ್ಗೆಶ್) ದಿನೇಶರ ತಂಡದಿಂದ ಹಾಸ್ಯನಾಟಕ, ಸುಳ್ಯದ ಅತ್ತೇಡಿ ಶ್ರೀದೇವಿ ಮತ್ತು ಅತ್ತೇಡಿ ವಿಶ್ವನಾಥ್‌ರ ತಂಡದಿಂದ ನೃತ್ಯ.**

**ಉಗ್ರಾಣಿ ವಿಜಿತ ಗಣಪತಿಯವರಿಂದ ನೃತ್ಯ ಮತ್ತು ಗಾಳಿಬೀಡಿನ ಕೋಳು ಮುಡಿಯನ ಮಿಲನ್ ಅನಂತ್‌ಕುಮಾರ್ ನವರಿಂದ ಬ್ರೇಕ್ ಡ್ಯಾನ್ಸ್ ಇದಲ್ಲದೆ ಶ್ರೀ ಹಾರಂಬಿ ರವಿಕುಮಾರ್, ಶ್ರೀ ಹೊದ್ದೇಟಿ ಭವಾನಿ ಶಂಕರ್, ಕುಶಾಲನಗರದ ಕಡ್ಯದ ರಾಣಿಯವರಿಂದ ಸುಮಧುರ ಹಾಡುಗಾರಿಕೆಗಳು ಇದ್ದವು.**

ಈ ಎಲ್ಲಾ ಕಾರ್ಯಕ್ರಮಗಳ ನಿರೂಪಣೆಯ ಜವಾಬ್ದಾರಿಯನ್ನು Main MCಗಳಾದ ಕಾಚಿಲಂಡ ಅಶೋಕ್ ಶ್ರೀಮತಿ ಬಿಟ್ಟೀರ ಚೋಂದಮ್ಮ ಶಂಭು ಹಾಗೂ ಕಡ್ಯದ ಸುಶೀಲ ಗೋಪಾಲ ಮತ್ತು ಕುಲ್ಲುಮಟ್ಲು ಬಸಪ್ಪನವರು ನಿರ್ವಹಿಸಿದ್ದರು.

ಸಹ ನಿರೂಪಕರಾಗಿ ಕೆಳಕಂಡ ಮೂರು ಜೋಡಿಗಳು ಕಾರ್ಯಕ್ರಮವನ್ನು ಸುಲಲಿತವಾಗಿ ರೂಪಿಸುವಲ್ಲಿ ಯಶಸ್ವಿಯಾದರು.

ಶ್ರೀ ಮಾಡಾವು ಸಂಪಾಜೆ ವಿಜಯ ಮತ್ತು ಅತ್ತೇಡಿ ಶ್ರೀದೇವಿ

ಕರ್ಣಯ್ಯನ ಸುನೀಲ್ ಹಾಗೂ ಕುಯ್ಯಮುಡಿ ನವೀನ್,

ಎಡಿಕೇರಿ ಸುಧರ್ಶನ್ ಮತ್ತು ಸುಳ್ಯಕೋಡಿ ವೈಶಾಲಿ ಅಮರ್‌ನಾಥ್.

ಅಂದಿನ ಸಾಂಸ್ಕೃತಿಕ ಕಾರ್ಯಕ್ರಮದ ವೈಶಿಷ್ಟ್ಯವೇನೆಂದರೆ, ಭಾಗವಹಿಸಿದ ಪ್ರತಿಯೊಬ್ಬ ಕಲಾವಿದನಿಗೂ ಕಾವೇರಿನಾಡು ಸಾಂಸ್ಕೃತಿಕ ಅಕಾಡೆಮಿಯ ವತಿಯಿಂದ ಕಂಚಿನ Memento ಹಾಗೂ Certificate ವಿತರಿಸಿದ್ದಲ್ಲದೆ, ಹೊರಗಿನ ಕಲಾವಿದರಿಗೆ ಹಣದ ರೂಪದ ಕಿರುಕಾಣಿಕೆಗಳನ್ನೂ ಕೊಡಲಾಯಿತು.

**ಅಕ್ಕನ ಚಿನ್ನವಾದರೂ ಆಚಾರಿ ಕದಿಯದೆ ಬಿಡನು**

ಪ್ರತಿಯೊಬ್ಬ ಮನುಷ್ಯನಿಗೆ ದೇವರು ಒಂದಲ್ಲ ಒಂದು ಕಲೆಯನ್ನು ವರವಾಗಿ ಕೊಟ್ಟಿರುತ್ತಾನೆಂಬುದು ಸತ್ಯ.

ತಂದೆತಾಯಿಗಳು ಬಾಲ್ಯದಲ್ಲಿ ತಮ್ಮ ಮಕ್ಕಳ ಕಲೆಯನ್ನು ಗುರುತಿಸಿ ಪ್ರೋತ್ಸಾಹಿಸಬೇಕು. ತದನಂತರ ಆ ಕಲೆಯನ್ನು ಉಳಿಸಿಕೊಂಡು ಬೆಳೆಸಿಕೊಳ್ಳಬೇಕಾದರೆ ಕಲಾವಿದನಿಗೆ ಒಂದು ವೇದಿಕೆ ಅಗತ್ಯ. ಈ ನಿಟ್ಟಿನಲ್ಲಿ ಶ್ರೀ ಅಮ್ಮಾಜೀರ ಪೊನ್ನಪ್ಪನವರು ಮಾಡುತ್ತಿರುವ ಕೆಲಸ ಬಹು ಗಮನಾರ್ಹವಾದ ಕಾರ್ಯವಾಗಿದೆ.

ನಾಡಿನ ಮೂಲೆಮೂಲೆಗಳಿಂದ ಕಲಾವಿದರನ್ನು ಆಹ್ವಾನಿಸಿ ಅವರಿಗೆ ತಮ್ಮ ಪ್ರತಿಭೆಯನ್ನು ತೋರಿಸಲು ಒಂದು ಉತ್ತಮ ಸುವರ್ಣಾವಕಾಶವನ್ನು ಕಲ್ಪಿಸಿಕೊಟ್ಟು ಪ್ರೋತ್ಸಾಹಿಸಿದ್ದಾರೆ.

ಸಾಂಸ್ಕೃತಿಕ ಕಾರ್ಯಕ್ರಮಗಳ ನಂತರ ಅತಿಥಿಗಳಿಗೆ ಸ್ವಾಗತ ಸತ್ಕಾರ, ಕೊಡುಗೈ ದಾನಿಗಳಿಗೆ ಸನ್ಮಾನಗಳು ನಡೆದವು. ನಂತರ ಕೊಡಗಿನ ಪದ್ಧತಿಯಲ್ಲಿ ಊಟೋಪಚಾರದ ವ್ಯವಸ್ಥೆಯಿತ್ತು. ಶ್ರೀ ಕಪಿಲಾ ಗಿರಿಯಪ್ಪನವರು Diary rich ice cream parlour ಒಂದನ್ನು ಸ್ಥಾಪಿಸಿದ್ದರು. ಮಕ್ಕಳು, ಮಹಿಳೆಯರು Ice cream ಸೇವಿಸಿ ತಂಪಾದರು.

ಇನ್ನೊಂದು ಕಡೆ 'ಕೊಡುಗು ಸಂಗಾತಿ' ಪತ್ರಿಕೆಯ ನವೀಕರಣ ಬರದಿಂದ ಸಾಗಿತ್ತು.

ಶ್ರೀಮತಿ ಜಾನಕಿ ಬೆಳ್ಯಪ್ಪನವರ ಶೋಬಾನೆ ಪದಗಳ ಸಂಕಿರಣ 'ಹಸೆಮಣೆ' ಪುಸ್ತಕದ ಮಾರಾಟವು ಇದೇ ಸಮಯದಲ್ಲಿ ನಡೆಯುತ್ತಿತ್ತು.

ಶ್ರೀ ಅಮ್ಮಾಜೀರ ಪೊನ್ನಪ್ಪನವರು ಹಾಗೂ ಶ್ರೀಮತಿ ಬಿಟ್ಟೀರ ಚೋಂದಮ್ಮ ಶಂಭುರವರ ಸಾಹಿತ್ಯವನ್ನೊಳಗೊಂಡ 4ನೇ ಧ್ವನಿಸುರುಳಿ ' ಕಾವೇರಿ ನಾಡ ಐಸಿರಿ'ಯನ್ನು ಅತಿಥಿಗಳಿಂದ ಬಿಡುಗಡೆಗೊಳಿಸಲಾಯಿತು.

ಈ ಸಾಂಸ್ಕೃತಿಕ ಕಾರ್ಯಕ್ರಮದ ಪ್ರಾಯೋಜಕರಾದ 'ವಿಜಯಕರ್ನಾಟಕ' ಪತ್ರಿಕೆ, 'ನೂತನ ವಾರಪತ್ರಿಕೆ ಹಾಗೂ ಭಾವನ ಪಾಕ್ಷಿಕ ಪತ್ರಿಕೆಯವರಿಗೆ ಕಿರುಕಾಣಿಕೆಗಳನ್ನು ಕೊಡಲಾಯಿತು.

ಎಲ್ಲಾ ಕಾರ್ಯಕ್ರಮಗಳ ನಂತರ ನಾಡ ಕೊಡಗು ವಾಲಗದ ಮೊರೆತ ಕಾಡುಕರೇನ ಹಳ್ಳಿಯಾದ್ಯಂತ ಮೊಳಗಲಾರಂಭಿಸಿದಾಗ ನಮ್ಮ ಜನ ಮೈಮರೆತು ಕುಣಿಯಲಾರಂಭಿಸಿದರು.

"ಸಹಬಾಳ್ವೆ ಸಂಘಟನೆಯು ಸಮ್ಮಿಲನವೇ ನಮ್ಮ ಧ್ಯೇಯ" ಎಂದು ಸಾರುತ್ತಾ 5 ವರ್ಷಗಳಿಂದಲೂ ಮುನ್ನಡೆದಿರುವ ಶ್ರೀಮಾನ್ ಶ್ರೀಮತಿ ಅಮ್ಮಾಜೀರ ಪೊನ್ನಪ್ಪ ದಂಪತಿಯರು ಆರಂಭ ಶೂರರೆನ್ನಿಸಿಕೊಳ್ಳದೆ ಛಲದಿಂದ ತಮ್ಮ ಗುರಿಯತ್ತ ಮುನ್ನಡೆದಿದ್ದಾರೆ.

ಗೌಡ ಜನಾಂಗದ ಒಗ್ಗಟ್ಟಿಗೋಸ್ಕರ ಹಗಲಿರುಳು ದುಡಿಯುತ್ತಿರುವ ಈ ದಂಪತಿಗಳಿಗೆ ನಾವೆಲ್ಲರೂ ಬೆಂಬಲಿಗರಾಗಬೇಕು. ಇವರಿಗೆ ಎಲ್ಲಾ ರೀತಿಯ ಯಶಸ್ಸನ್ನು ಕರುಣಿಸಲೆಂದು ಕುಲ ದೇವರು ವೆಂಕಟರಮಣನಲ್ಲಿ ಮತ್ತು ತಾಯಿ ಶೃಂಗೇರಿಯಲ್ಲಿ ನಮ್ಮ ಪ್ರಾರ್ಥನೆ.

– ಎಡಿಕೇರಿ ಸುಧರ್ಶನ್, ಬೆಂಗಳೂರು

## ದಿನಾಂಕ 10-9-2000ದಲ್ಲಿ ಹಾಸನದಲ್ಲಿ ವಿಜೃಂಭಿಸಿದ ಕೈಲ್‌ಪೊಳ್ದ್



ದಿನಾಂಕ 10-9-2000 ರಂದು ಬೆಳಿಗ್ಗೆ 10-00ಗಂಟೆಗೆ ಹಾಸನದ ಹೋಲಿ ಚಿಲ್ಡ್ರನ್ ಇಂಗ್ಲಿಷ್ ಕಾನ್ವೆಂಟ್‌ನಲ್ಲಿ ಕೊಡಗು ಮತ್ತು ದಕ್ಷಿಣ ಕನ್ನಡ ಅರೆಭಾಷಿಕ ಗೌಡ ಜನಾಂಗದವರು ಹಾಗೂ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿರುವ ಅರೆಭಾಷಿಕ ಗೌಡರು ಸೇರಿ ಪ್ರತಿವರ್ಷ ಆಚರಿಸುವಂತೆ ಕೈಲ್ ಮುಹೂರ್ತ ಹಬ್ಬವನ್ನು ಆಟೋಟಗಳ ಸ್ಪರ್ಧೆಯೊಂದಿಗೆ ಪ್ರಾರಂಭಿಸಲಾಯಿತು. ನಂತರ ನಡೆದ ಸಮಾರಂಭದಲ್ಲಿ ಶ್ರೀ ಕುದುಪಜೆ ಚಂದ್ರಶೇಖರ್, ಶ್ರೀಮತಿ ಪರ್ಲಕೋಟಿ ಸುಬ್ಬಮ್ಮ, ಡಾ|| ಹೆಚ್. ನಾಗರಾಜ್ ಅತಿಥಿಗಳಾಗಿದ್ದರು. ಮೊದಲಿಗೆ ಕು|| ವಿದ್ಯಾ ಸಂಗಡಿಗರಿಂದ ಪ್ರಾರ್ಥನೆ, ಸಂಘದ ಕಾರ್ಯಾಧ್ಯಕ್ಷರಾದ ಕೈಬೀಲಿರ ಶ್ರೀ ಪೊನ್ನಣ್ಣನವರಿಂದ ಸ್ವಾಗತ ಭಾಷಣ, ಸಂಘದ ಕಾರ್ಯ ದರ್ಶಿಗಳಾದ ಕಲ್ಲುಮುಟ್ಲು ಲೋಕನಾಥ್‌ರವರಿಂದ ಸಂಘದ ಕಾರ್ಯ ಚಟುವಟಿಕೆಗಳ ಕುರಿತು ಸಂಕ್ಷಿಪ್ತ ವರದಿ, ಮುಖ್ಯ ಅತಿಥಿಗಳಿಂದ ಭಾಷಣ ಹಾಗೂ ಹಿತವಚನ, ಹಾಗೂ ವಿವಿಧ ಸ್ಪರ್ಧೆಗಳಲ್ಲಿ ವಿಜೇತ ರಾದವರಿಗೆ ಬಹುಮಾನ ವಿತರಣೆ ಹಾಗೂ ಕೆ. ಎಸ್. ಲೋಕನಾಥ್‌ರವರಿಂದ ವಂದನಾರ್ಪಣೆಯೊಂದಿಗೆ ಸಭೆ ಮುಕ್ತಾಯವಾಯಿತು. ನಂತರ ಕೊಡಗಿನ ಪದ್ಧತಿಯಂತೆ ಎಲ್ಲರಿಗೂ ಭೋಜನ ಏರ್ಪಡಿಸಲಾಯಿತು. ಈ ಸಮಾರಂಭವು ಶ್ರೀ ಕೆ. ಎಸ್. ಗಣೇಶ್ ಸಂಘದ ಖಜಾಂಚಿ, ಮತ್ತು ಎಲ್ಲಾ ಸದಸ್ಯರುಗಳ ಸಹಕಾರದೊಂದಿಗೆ ಯಶಸ್ವಿಯಾಗಿ ನಡೆಯಿತು.

ವರದಿ ಕೆ. ಎಸ್. ಗಣೇಶ್

---

### ನಗೆಹನಿ

ಪೊಲೀಸ್ ಅಧಿಕಾರಿ : ಒಂದೇ ಅಂಗಡಿಯ ಬಾಗಿಲನ್ನು ಸತತವಾಗಿ ಮೂರು ಬಾರಿ ಏಕಯ್ಯಾ ಒಡೆದು ಹಾಕಿದೆ?

ಕಳ್ಳ : ಸರ್, ಅದು..... ಆ ಅಂಗಡಿಯಿಂದ ನನ್ನ ಹೆಂಡ್ತಿಗೆ ಒಂದು ಜೊತೆ ಬಟ್ಟೆ ಕದ್ದಿದ್ದೆ. ಅದು ಅವಳಿಗೆ ಅಳತೆ ಸರಿಹೋಗಲಿಲ್ಲ. ಅದನ್ನು ನಾನು ಎರಡು ಸಾರಿ ಬದಲಾಯಿಸಬೇಕಾಗಿತ್ತು. ಅದಕ್ಕೆ ಒಡೆದೆ ಸಾರ್.

– ಕಾನಡ್ಕ ಚರಣ್, ಮರಗೋಡು

---

ಹೆಚ್ಚು ನಗೆ ದುಃಖಕ್ಕೆ ಮೂಲ

# ಸಣಪನ ಸಂತೆಯ ಗಮ್ಮತ್ತ್

ಸಣವ, ಸಣಪಂಗೆ ಎಷ್ಟು ಬೈಯದು ಹೋಗಲಿ ಹೊಡ್ದರು..!! ಸಣಪ ಕಳ್ಳ್‌ಕುಡಿಯದು ಬುಟ್ಟದೇನಾ? ಹ್ಹಾ....! ಅದೆಲ್ಲ ನೀರ್ ಮೇಲಿನ ಗುಳ್ಳೆನಂಗೆ. ಲೆಕ್ಕಕೇ.... ಇಲ್ಲೆ. ಹಂಗೆ ಮೊನ್ನೆ ಶುಕ್ರವಾರ ಸಂತೆಗೆ ಸಣಪ ಮಡಿಕೇರಿಗೆ ಹೊರ್ಪತ್ ಅಂದ್ ಹೊತಾರೆ ಹನಿಯ ಮಳೆ ಹನ್‌ಕಿದಕೆ ಸಣವ ಏನೋ ಒಟ್ಟಿಗೆ ಹೊರ್ಪ್‌ತಲೆ ಇಲ್ಲೆರೆ....? ಒಟ್ಟಿಗೆ ನೆರಳ್‌ನಂಗೆ ಹೊರ್ಪವೆ. ಸಣಪ ಹೊರ್ಪ್‌ಕಾಕನ ಹಂಗೆ ಗೋಣಿಬ್ಯಾಗ್‌ಲಿ ನಾಲ್ಕ್ ಲಾಕಿ ಕೋಳಿಗಳ ಕಾಲ್‌ಕಟ್ಟಿ ಮಾರಿ ಕೇತ ಹಾಕಂಡತ್. ಹೊರ್ಪ್ ಹಂಗೆ ಗದ್ದೆಲ್ಲಿ ದಾಟಿಕಂಡ್ ಮಣ್ಣ್‌ರೋಡಿಗೆ ಬಂದ್ ರಸ್ತೆಗೆ ಬಾಕನ ಸಣಪಂಗೆ ಸಾಕ್‌ಸಾಕಾತ್. ಸೀದ ಹೋಗಿ ಬಸ್ಸ್‌ಸ್ಟಾಪ್‌ಲಿ ಕುದ್ದುಕಂಡ್ ವಾಚ್ ನೋಡ್‌ಕಾಕನ ಬಸ್ಸ್ ಬಾಕೆ ಸುಮಾರ್ ಹೊತ್ತು ಉಟ್ಟುತ ಆತ್. ಅಷ್ಟೊತ್ತ್ ಎಂತ ಮಾಡ್ವುತ ಸೀದ ಕಾಟಿಸಾಪ್‌ಗೆ ನುಗ್ಗಿತ್. ಬಸ್ಸ್ ಬಾಕಾಕನ ಮೆಲ್ಲೆ ಏಸಂಡ್ ಮಾಳಿಂದ ಹೊರ್ಪಂಗೆ ಹೊರಗೆ ಬಾತ್. ಕಣ್ಣ್ ಎಲ್ಲ ಕೆಂಪಾವುಟು ಈಗ ನರಗಳಿಗೆ ಶಕ್ತಿ ಬಾತ್‌ತ ಗ್ಯಾನ ಮಾಡಿಕಂಡ್ ಬಸ್ಸ್ ಹತ್ತಿತ್. ಒಳಗೆ ನೋಡ್ರೆ ಕೂರಿಕೆ ಸೀಟ್ ಉಟ್ಟಾ, ಅದ್ ಇಲ್ಲೆ ಸೀಟ್ ಸಿಗದಿದ್ದರೂ ಪರ್ವಾಗಿಲ್ಲೆ ಕಾಲ್‌ಗೆಲ್ಲ ಶಕ್ತಿ ಬಂದುಟುತ ಗ್ಯಾನ ಮಾಡಿಕಂಡ್ ಬಸ್ಸ್‌ಲಿರ ಕಂಬಕೆ ಒರ್ಗಿ ನಿತ್ತತ್. ಸಣಪ ಸುಮ್ಮನಿದ್ದರೂ ಆ ಹಾಳ್ ಕೋಳಿಗ ಸುಮ್ಮನಿದ್ದವೇನಾ? ಅದ್ ಕಯ್ಯೊಂ-ಪಿಯ್ಯೊಂ-,ಕಯ್ಯೊಂ-ಪಿಯ್ಯೊಂ, ತ ಮರ್ಡಿಕೆ ಸುರು ಮಾಡ್ದೊ. ಅಷ್ಟೊತ್ತಿಗೆ ಜನಗೆಲ್ಲ ಹಿಂದೆ ತಿರ್ಗಿ ನೋಡ್‌ಕಾಕನ ಕಂಡೆಕ್ಟರ್ ಕೇಳ್ತ್ 'ಯಾರದ್ರಿ ಅದು ಕೋಳಿ, ಇಳಿರಿ ಬಸ್ಸಿಂದ" ತ ಹೇಳಿ ಕಂಡ್ ಸಣಪನ ಹತ್ರ ಬಾಕನ ಸಣಪ ಏರ್ಸಿದ ಎರಡ್ ಪ್ಯಾಕೆಟ್ ಕಾಟಿಲಿ ಒಂದು ಪ್ಯಾಕೆಟ್‌ದ್ ಪವ್ರು ಎಲ್ಲ ಇಳ್ದ್ ಹೋದಂಗೆ ಆತ್. ಇನ್ನೆಂತ ಮಾಡ್ವು ತ ಇದ್ದ ನಾಲ್ಕ್ ಕೋಳಿಗೆ ಲೆಗ್ಗೇಜ್ ಚಾರ್ಜ್ ಕೊಟ್ಟ್ ಕಂಡಕ್ಟರ್‌ನ ಮರ್ಳ್ ಮಾಡ್ತ್. ಹಂಗೆ ಸ್ವಲ್ಪ ದೂರ ಹೋಕನ ಸಣಪನ ಅದೃಷ್ಟಕ್ಕೆ ಹೆಂಗೂ ಕಿಟಕಿ ಕರೆ ಸೀಟ್ ಸಿಕ್ಕಿತ್. ಹತ್ರ ಒಟ್ಟಿಗೆ ಬ್ಯಾರೆ ಅಜ್ಜಿ ಕುದ್ದುಟು. ಕೋಳಿ ಇರುವ ಬ್ಯಾಗ್‌ನ ಕಾಲ್ ಸೆರೇಲಿ ಮಡ್ಗಿಕಂಡತ್. ಇನ್ನ್ ಮಡಿಕೇರಿ ಸುಮಾರ್ ದೂರ ಉಟ್ಟುತ ಗ್ಯಾನ ಮಾಡಿಕಂಡ್ ಆರಾಮ್‌ಲಿ ಕುದ್ದ್ ಗತ್ತ್‌ಲಿ ಇದ್ದ ಒಂದು ಸಿಗರೇಟ್ ಸೇದಿಕೆ ಸುರುಮಾಡ್ತ್. ಒಂದು ದಮ್ಮ್ ಎಳ್ದದೆ ಇರ್ದು, ಹತ್ರ ಕುದ್ದ ಅಜ್ಜಿ ಬಾಯಿ ಬಡಿಯಕೆ ಸುರು ಮಾಡ್ತಲಾ, "ಏನ್ರಿ ಬಸ್ಸ್‌ಲಿ ಸಿಗರೇಟ್ ಸೇದುತ್ತೀರಾ? ಏನು ಬೋರ್ಡ್ ಕಾಣ್ಸೊದಿಲ್ವಾ? ನಿಮಗೇನು ತಲೆಸರಿ ಇಲ್ವ?" ಇನ್ನ್ ಎಂತೆಲ್ಲಾ ಹೇಳಿಕಂಡ್ ಬೈಯ್ಯಕೆ ಸುರುಮಾಡ್ತ್. ಆ ಅಜ್ಜಿ ಕಟ್ಟಿದ ಸೆಟ್ಟ್ ಹಲ್ಲ್‌ನ ಹೊಡ್ದ್ ಮುರ್ದು ಬುಡುವಷ್ಟ್ ಸಿಟ್ಟ್‌ಬಾತ್ ಸಣಪಂಗೆ. ಅಷ್ಟೊತ್ತಿಗೆ ಕಂಡಕ್ಟರ್‌ನು ಬೈಯ್ಯಕೆ ಸುರುಮಾಡ್ತ್. ಎಂತ ಮಾಡ್ದು ಸೇದಿದ್ ಬ್ಯಾರೆ ಒಂದೆ ದಮ್ಮ್‌ತ ಗ್ಯಾನ ಮಾಡಿಕಂಡ್ ಸೀಟ್ ಅಡಿಗೆ ಒತ್ತಿ ಬೆಂಕಿ ಕೆಡ್‌ಸಿ ಕೋಟ್ ಜೇಬೊಳಗೆ ಇಟ್ಟ್‌ಕಂಡತ್.

ಹಿಂಗೆಲ್ಲ ಆಕನ ಮಡಿಕೇರಿ ಬಂದೆ ಬುಡ್ತ್ ಹಂಗೆ ಸ್ಟ್ಯಾಂಡ್‌ಲಿ ಇಳಿಯಕನ ಜೋರ್ ಮಳೆಬ್ಯಾರೆ, ಹಂಗೆ ಇಳ್ದ್ ಚೌಕಿ ಕಡೆ ನಡ್ದ್ ಸೀದ ಮೇಲೆ ರೋಡ್‌ಲಿ ಮಾರ್ಕೆಟ್ ಕಡೆ, ಒಂದು ಕೈಲಿ ಕೊಡೆ, ಇನ್ನೊಂದು ಕೈಲಿ ಕೋಳಿಬ್ಯಾಗ್ ಹಿಡ್ಕಂಡ್ ಹೋತ್.

ಮಡಿಕೇರಿಲಿ ಗಾಳಿ ಹೇಳೊಕಾ ಒಂದ್ಸಲ ಮುಂದೆಂದ ಬೀಸಿರೆ, ಇನ್ನೊಂದು ಸಲ ಹಿಂದೆಂದ, ಹಿಂಗೆಲ್ಲಾ ಆಕನ ಸಣಪನ ಕೊಡೆ ಹಿಂದಕೆ ಮಡ್ಚಿ ಎರ್ಡ್‌ಮೂರ್ ಕಡ್ಡಿ ಮುರ್ದು ಹೋತ್. ಆ ಕೊಡೆನ ಸರಿಮಾಡಿ ಮಾರ್ಕೆಟ್ ಹತ್ರ ಬಾಕನ ಸಣಪ ಹಾಕಿದ ಪ್ಯಾಕೆಟ್‌ದ್ ಪವ್ರು ಎಲ್ಲ ಇಳ್ದ್ ಹೊತ್. ಆ ಚಳಿ, ಗಾಳಿ, ಮಳೆಗೆ ಈ ಲಾಕಿ ಕೋಳಿಗಳ ಹೆಂಗೆ ಕುದ್ದು ಕಂಡ್ ಮಾರ್ದು ತ ಗ್ಯಾನ ಮಾಡಿ ಅಲ್ಲೆ ಕೋಳಿ ಮಾರಿಕಂಡ್ ಕುದ್ದವಂಗೆ ಆರಕೆ ಮೂರಕೆ ದುಡ್ಡಿಗೆ ಮಾರ್ತ್. ಸಿಕ್ಕಿದ ದುಡ್ಡ್‌ಲಿ ಸಣವ ಹೇಳ್ದ ಸಾಮಾನೆಲ್ಲ ತುಂಬುಸಿಕಂಡ್ತ್. ನಮ್ಮ ಸಣಪ ಉಟ್ಟಲಾ ಒಂತರ ಸಿಟಿಬಸ್ಸ್ ಇದ್ದಂಗೆ, ಎಲ್ಲಿ ಕೆಂಪು ಬೋರ್ಡ್ ಕಂಡತ್ ಅಲ್ಲಿ ಒಂದು ಸ್ಟಾಪ್....! ಈ ಚಳಿಗೆ ನಡ್ಗಟ ಹೋಕೆ ಎಂತ ಮಾಡ್ದುತ ಗ್ಯಾನ ಮಾಡಿ ಅಲ್ಲೆ ಹತ್ರ ಇದ್ದ, ಕೆಂಪು ಬೋರ್ಡ್ ಸಾಪ್‌ಗೆ ನುಗ್ಗಿ ಮೂರ್ ಪ್ಯಾಕೆಟ್ ಕಾಟಿಕುಡ್ಕಂಡ್ ಒಂದ್ ಪ್ಯಾಕೆಟ್ ಬ್ಯಾಗ್‌ಲಿ ಹಾಕಂಡ್ತ್ ದಾರಿ ಕರ್ಚಿಕೆತ. ಹೊರಗೆ ಬಾಕಾನ ಒಳ್ಳೆ ಮಿಲ್ಟ್ರಿಲಿ ಪೆರೇಡ್ ಮಾಡ್ವಂಗೆ ಕಾಲ್‌ಲಿದ್ದ ಗಂಬೂಟುನ ದಡ್ಕ-ಬಡ್ಕತ ಸದ್ದ್ ಮಾಡಿಕಂಡ್ ನಡಿಯಕೆ ಸುರುಮಾಡ್ತ್. ಸ್ವಲ್ಪ ದೂರ ನಡ್ದದೆ ಇರ್ದು ಮಿಲ್ಟ್ರಿಲಿ ಕಾಲ್ ಕಾಲ್ ಹಾಕಿದಂಗೆ ಹಾಕಿಗೆ ಹೋಗಿ ಕತ್ರಿಕಾಲ್ ಹಾಕಂಡ್ ನಡಿಯಕೆ ಸುರು ಮಾಡ್ತ್...! ಸಣಪಂಗೆ ರೋಡ್ ಯಾವ್ದು ಚರಂಡಿ ಯಾವ್ದುತ ಕಾಂಬದೇಲೆ, ಮಾರ್ಕೆಟ್‌ಂದ ಸ್ಟ್ಯಾಂಡಿಗೆ ಇಳ್ಕಂಡ್ ಬಾಕೇ ಆದುಲೆ. ಕೈಲಿ ಬ್ಯಾರೆ ಬ್ಯಾಗ್ ಫುಲ್ ಸಾಮಾನು ಉಟ್ಟು. ಸಲ್ಪ ಕುದ್ದು ಪೋಯಿತ ಗ್ಯಾನ ಮಾಡಿ ರೊಡ್‌ಸೈಡ್‌ಲಿ ಕುದ್ದರೆ, ಕೂರಿಕೆ ಆದೇನಾ, ಅಲ್ಲೆ ಬ್ಯಾಗ್‌ನ ಸೈಡ್‌ಗೆ ಮಡ್ಗಿ ಮಲ್ಗಿತ್. ಹಂಗೆ ಮಲ್ಗಿ ಚಳಿ, ಮಳೆಗೆ ಸುಮಾರ್ ಹೊತ್ತು ಆಕನ ಮೆಲ್ಲೆ ಎಚ್ಚರ ಆಗಿ ಕಣ್ಣ್ ಬುಟ್ಟು ನೋಡ್ಕನ ಸಾಯಂಕಾಲ ಆವುಟು. ಸಣಪ ಅತ್ತ ಇತ್ತ ನೋಡದೆ ಸುಬಗರಂಗೆ ಸೀದ ನೆಟ್ಟಂಗೆ ಬಂದ್ ಮನೆ ಕಡೆ ಹೋಗುವ ಲಾಸ್ಟ್ ಬಸ್ಸಿಗೆ ಹತ್ತಿತ್. ಹಂಗೆ ಬಸ್ಸ್‌ಲಿ ಬಾಕಾಕನ ಮಳೆಲಿ ನೆಂದದ್ ಬ್ಯಾರೆ, ಚಳಿ ಆಗಿ ನಡ್ಗಿಕೆ ಸುರಾತ್. ಬಸ್ಸ್‌ಂದ ಇಳಿಯುವ ಜಾಗ ಹತ್ರ ಭಾದೆ ತಡ ಬಸ್ಸ್‌ಂದ ಇಳ್ದ್ ಹಸಿದ ಹುಲಿನಂಗೆ ಕೊನೆ ಆಟ....ತ್ತೇಳಿ ಕಾಟಿಸಾಪ್‌ಗೆ ನುಗ್ಗಿ ಪ್ಯಾಕೆಟ್ ಕುಡ್ಕಂಡ್ ಸೀದಾ ಮನೆ ಕಡೆ ನಡ್ತ್. ಹಂಗೆ ನಡ್ಕಂಡ್ ಮಣ್ಣ್‌ರೋಡ್ ದಾಟಿ ಗದ್ದೆಗೆ ಬಾಕನ ತೋಡ್ ತುಂಬ ನೀರ್ ಉಟ್ಟು. ಕೈ ತಾಂಗ್ ಇಲ್ಲದ ಮರದ ಪಾಲಲಿ ಹೆಂಗೂ ತಡ್ರಿಸಿಕಂಡ್ ಮೆಲ್ಲೆ ದಾಟಿ ಗದ್ದೆಗೆ ಬಾತ್. ಗದ್ದೆಲಿ ಕತ್ರಿಕಾಲ್ ಹಾಕಂಡ್ ನಡ್‌ಕಂಡ್ ಬಾಕನ ಕಾಲ್‌ಗೆ ಏನು ಸಿಕ್ಕಿತೊ ಏನೊ? ಮುಂಗುರಿಸಿ ಬಿದ್ದರೆ ಸಣಪನು, ಬ್ಯಾಗುನು ಒಟ್ಟಿಗೆ ಗದ್ದೆಗೆ. ಬ್ಯಾಗ್‌ಲಿದ್ದ ಸಂಬಾರನು, ಜೀರಿಗೆನು ಗದ್ದೆಗೆ ಬಿದ್ದ್ ನಾಟಿ ಮಾಡ್ದ ಗದ್ದೆಲಿ ನೀರಿಗೆ ಬೀಜ

20ನೇ ಪುಟಕ್ಕೆ

# 25 ವರ್ಷಗಳ ಕಾಲ ಲೋಕಸಭಾ ಕ್ಷೇತ್ರಗಳ ಪುನರ್ವಿಂಗಡಣೆ ಮಾಡದಿರಲು ಕೇಂದ್ರ ಸರಕಾರ ನಿರ್ಧರಿಸಿರುವದು ಆಕ್ಷೇಪಾರ್ಹವೆಂದು ಪ್ರಜಾ ವೇದಿಕೆ

ಕೊಡಗಿಗೆ ಪ್ರತ್ಯೇಕ ಲೋಕಸಭಾ ಕ್ಷೇತ್ರ ಬೇಕೆಂಬ ಬಹು ಜನರ ಬೇಡಿಕೆಗೆ ಕೇಂದ್ರ ಸರಕಾರ ತೆಗೆದುಕೊಂಡಿರುವ ನಿಲುವಿನಿಂದ ಜನತೆಗೆ ತೀವ್ರವಾದ ಧಕ್ಕೆಯಾಗಿದೆ. ಅಲ್ಲದೆ, ಇನ್ನೂ 25 ವರ್ಷಗಳ ಕಾಲ ಲೋಕಸಭಾ ಕ್ಷೇತ್ರಗಳನ್ನು ಪುನರ್ವಿಂಗಡಣೆ ಮಾಡದಿರಲು ಕೇಂದ್ರ ಸರಕಾರ ನಿರ್ಧರಿಸಿರುವದು ಆಕ್ಷೇಪಾರ್ಹ ಎಂದು ಕೊಡಗು ಪ್ರಜಾವೇದಿಕೆ ಟೀಕಿಸಿದೆ.

ಈ ಕುರಿತು ಪತ್ರಿಕಾ ಹೇಳಿಕೆ ನೀಡಿರುವ ವೇದಿಕೆಯ ಅಧ್ಯಕ್ಷರಾದ ಎಂ. ಟಿ. ವಿಜಯೇಂದ್ರ ಅವರು, ಸರಕಾರದ ಈ ನಿರ್ಧಾರದಿಂದಾಗಿ ಜಿಲ್ಲೆಯ ಹಲವು ವರ್ಷಗಳ ಬೇಡಿಕೆ ನೆನೆಗುದಿಗೆ ಬಿದ್ದಂತಾಗಿದೆ ಎಂದು ಹೇಳಿದ್ದಾರೆ. ಅಲ್ಲದೆ, ಪ್ರತ್ಯೇಕತಾವಾದಿಗಳಿಂದಾಗಿ ದೇಶದ ಪ್ರಜಾಪ್ರಭುತ್ವಕ್ಕೆ ಹಾಗೂ ಭದ್ರತೆಗೆ ಧಕ್ಕೆಯಾಗಿದೆ ಎಂದು ಆರೋಪಿಸಿರುವ ಅವರು, ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡ ಕಡ್ಡಾಯಗೊಳಿಸುವದರೊಂದಿಗೆ ಹುದ್ದೆಗಳ ನೇಮಕಾತಿಯಲ್ಲಿ ಕನ್ನಡ ಅಭ್ಯರ್ಥಿಗಳಿಗೆ ಮೀಸಲಾತಿ ನೀಡಬೇಕು, ಹೊರ ದೇಶಗಳಿಗೆ ಕಳಪೆ ಕಾಫಿಯನ್ನು ರಫ್ತು ಮಾಡಿರುವದರಿಂದ ಬೆಳೆಗಾರರಿಗೆ ಆತಂಕ ಸೃಷ್ಟಿಯಾಗಿದೆ. ಈ ಪ್ರಕರಣದಲ್ಲಿ ಶಾಮೀಲಾಗಿರುವ ಅಧಿಕಾರಿಗಳನ್ನು ತಕ್ಷಣ ಅಮಾನತು ಗೊಳಿಸಿ, ಕಾನೂನು ಕ್ರಮ ಕೈಗೊಳ್ಳಬೇಕು ಎಂದು ವಿಜಯೇಂದ್ರ ಒತ್ತಾಯಿಸಿದ್ದಾರೆ.

ಭಾಗಮಂಡಲ ಹಾಗೂ ತಲಕಾವೇರಿ ಅಭಿವೃದ್ಧಿಗಾಗಿ ದೀರ್ಘಕಾಲೀನ ಯೋಜನೆ ರೂಪಿಸಲು ವೇದಿಕೆ ಶ್ರಮಿಸಲಿದೆ ಎಂದು ಹೇಳಿಕೆಯಲ್ಲಿ ವೇದಿಕೆಯ ಪದಾಧಿಕಾರಿಗಳಾದ ವಿಧ್ಯಾಧರ ಹಾಗೂ ಹನೀಫ್ ಅವರು ವಿವರಿಸಿದ್ದಾರೆ ಎಂದು ತಿಳಿದು ಬಂದಿದೆ.

ಸಂಗಾತಿ.

---

# "ಲೋಪಾಮುದ್ರೆ ಒಂದು ವ್ಯಾಖ್ಯಾನ"

"ಲೋಪಾಮುದ್ರೆ"ಪೂಜ್ಯ ಮಾತೆ ಕಾವೇರಿಯ ಪೂರ್ವದ ಹೆಸರು ಲೋಪಾಮುದ್ರೆ ಎಂದು ನೀವೆಲ್ಲರೂ ತಿಳಿದಿರುವಿರಿ. ಮುದ್ರೆ ಎಂದರೆ ಚಿನ್ಹೆ ಎಂದರ್ಥ.

ದೇವಿ ಕಾವೇರಿಯು ಆದಿಶಕ್ತಿ ಲಲಿತಾ ಮಾತೆಯ ಉಪಾಸಕಳು. ಸ್ತ್ರೀ ಪ್ರಧಾನವಾದ ವಿದ್ಯೆಯು ಶ್ರೀ ವಿದ್ಯೆ ಎಂದೂ ಅದೇ ಆತ್ಮಜ್ಞಾನವು ಪುರುಷ ಪ್ರಧಾನವಾಗಿದ್ದರೆ ಬ್ರಹ್ಮನಿಗೆ ಎನಿಸುತ್ತದೆ. ದೇವಿ ಅಥವಾ ದೇವನನ್ನು ಕುರಿತು ಪೂಜೆ, ಜಪ, ತಪಾದಿಗಳಿಂದ ಅರ್ಚಿಸುವುದನ್ನು ಉಪಾಸನೆ ಎಂದು ಹೇಳುತ್ತಾರೆ. ಹೀಗೆ ಉಪಾಸಿಸುವಾಗ ಅನುಸರಿಸುವ ಮಾರ್ಗ ಮತ್ತು ಮುದ್ರೆಗಳಿವೆ. ಹಾಗೆಯೇ ಶ್ರೀ ಕಾವೇರಿ ಮಾತೆಯು ದೇವಿ ಜಗದಂಬೆಯಾದ ಶ್ರೀ ಲಲಿತಾ ಮಾತೆಯನ್ನು ಅರ್ಚಿಸುವಾಗ ಅನುಸರಿಸಿದ ಮುದ್ರೆಗೆ "ಲೋಪಾಮುದ್ರೆ"ಎಂದು ಹೆಸರು. ಸಮಯ ಮತ ಕೌಲಮತ ಮತ್ತು ಮಿಶ್ರಮತ ಎಂದು ದೇವಿಯ ಉಪಾಸನೆಯು ಮೂರು ವಿಧವಾಗಿದೆ. ಅಲ್ಲದೆ ಕಕಾರ ಆದಿಯಾಗಿರುವ ಮಂತ್ರವು ಕಾದಿ ಮತವೆಂದು, ಹಕಾರ ಆದಿಯಾಗಿರುವ ಮಂತ್ರವು ಹಾದಿ ಮತವೆಂದು ಪರಿಗಣಿಸಲ್ಪಟ್ಟಿದೆ. ಲೋಪಾಮುದ್ರೆಯಿಂದ (ಕಾವೇರಿಯಿಂದ) ಉಪಾಸಿಸಲ್ಪಟ್ಟ ಮಂತ್ರವು ಹಾದಿ ಮತವಾಗಿರುವುದು. ಶುಕ ವಸಿಷ್ಠಾದಿ ಪಂಚ ಸಂಹಿತೆಗಳಲ್ಲಿಯೂ ವೈದಿಕ ಮಾರ್ಗದಲ್ಲಿಯೂ ವಿಧಿಸಲ್ಪಟ್ಟಿರುವುದು ಸಮಯ ಮತ. ಚಂದ್ರಕಲಾ ಮೊದಲಾದ ಎಂಟು ತಂತ್ರಗಳಲ್ಲಿ ಉಕ್ತವಾಗಿರುವುದು ಮಿಶ್ರಮತ. ಇದು ಕೌಲ ಸಮಯ ಮತಗಳೆರಡನ್ನೂ ಹೊಂದಿರುವುದರಿಂದ ಮಿಶ್ರ ವೆನಿಸುತ್ತದೆ. ಇವೆರಡರಿಂದ ಭಿನ್ನವಾದುದು ಕೌಲಮಾರ್ಗ. ಇದು ವಂಶಪಾರಂಪರ್ಯದಿಂದ ಒಂದು ಕುಲಕ್ಕೆ ಸಂಬಂಧಿಸಿರುವುದರಿಂದ ಕೌಲಮತವೆನಿಸುತ್ತದೆ. ಯಾವನಿಗೆ ದೇವಿಯು ಕುಲಮಾರ್ಗದಿಂದ ಸಂಸ್ಥಿತಳಾಗಿರುವಳೋ ಅವನು ಅದರ ಮೂಲಕ ದೇವಿಯನ್ನು ಬಲಿಗಂಧಾನು ಲೇಪನಗಳಿಂದ ಪೂಜಿಸಬೇಕು. "ಯಸ್ಯ ಯಸ್ಯ ಹಿ ಯಾ ದೇವಿ ಕುಲಮಾರ್ಗೇಣ ಸಂಸ್ಥಿತಾ| ತೇನ ತೇನ ಚ ಸಾ ಪೂಜ್ಯ ಬಲಿ ಗಂಧಾನು ಲೇಪನ್ಯೆಃ| ಎಂದು ವ್ರತಖಂಡದಲ್ಲಿ ಹೇಳಿದೆ.

ಪ್ರಸಿದ್ಧರಾದ ಹನ್ನೆರಡು ಮಂದಿ ಉಪಾಸಕರ ಅನುಸಾರವಾಗಿ ಶ್ರೀವಿದ್ಯೆಯು ಹನ್ನೆರಡು ಬಗೆಯಾಗಿದೆ. ಮನು, ಚಂದ್ರ, ಕುಬೇರ, ಲೋಪಾಮುದ್ರೆ, ಮನ್ಮಥ, ಅಗಸ್ತ್ಯ, ಅಗ್ನಿ, ಸೂರ್ಯ, ಇಂದ್ರ, ಸ್ಕಂದ, ಕ್ರೋಧಭಟ್ಟಾರಕ (ದೂರ್ವಾಸ) ಮತ್ತು ಶಿವ. ಶಿವನಿಂದ ಮುಂದುವರಿದ ಶಾಖೆಯೇ ಗೌಡಪಾದರಿಂದ ಮುಂದುವರಿದು ಶೃಂಗೇರಿಯ ಗುರುಗಳವರೆಗೆ ಬಂದಿರುವ ವಿಷಯ ನನ್ನ ಹಿಂದಿನ ಲೇಖನದಲ್ಲಿ ತಿಳಿಸಿರುವೆ.

ಲೋಪಾಮುದ್ರೆಯು ಅಗಸ್ತ್ಯನ ಪತ್ನಿ, ಅವನ ಪತ್ನಿಯಾದ ಲೋಪಾಮುದ್ರೆಯು ನನ್ನನ್ನು ಅತಿ ಭಕ್ತಿಯಿಂದ ಉಪಾಸಿಸುತ್ತಾಳೆ. "ಪತ್ನ್ಯಸ್ಯ ಲೋಪಾಮುದ್ರಾಖ್ಯಾ ಮಾಮುಪಾಸ್ತೇತಿ ಭಕ್ತಿತಃ"| ಎಂದು ತ್ರಿಶತಿಯಲ್ಲಿ ಹೇಳಿದ. ಪರಮೇಶ್ವರಿಯು ಅಗಸ್ತ್ಯನ ಪತ್ನಿಯಾದ ಲೋಪಾಮುದ್ರೆಯಲ್ಲಿ ಅತ್ಯಂತ ಪ್ರಸನ್ನಳಾದುದರಿಂದ ಈ ದೇವಿಯು ಲೋಪಾಮುದ್ರೆಯೆಂದು ಲಲಿತಾ ಸಹಸ್ರ ನಾಮದಲ್ಲಿ ಹೊಗಳಲ್ಪಟ್ಟಿದ್ದಾಳೆ. "ಅಗಸ್ತ್ಯ ಪತ್ನ್ಯಾ ಲೋಪಾ ಮುದ್ರಾಯ: ಪರಮೇಶ್ವರೀ ಪ್ರಸನ್ನತ್ವಾದಿಯಂ ದೇವೀ ಲೋಪಾ ಮುದ್ರೇತಿ ಗೀಯತೇ||" ಎಂದು ತ್ರಿಪುರ ಸಿದ್ಧಾಂತದಲ್ಲಿ ಹೇಳಿದೆ. ಅಥವಾ ಲೋಪಾಮುದ್ರಾ ಮಂತ್ರದಿಂದ ಅರ್ಚಿತಳಾದವಳು. ಅಲ್ಲದೆ ಪಂಚದಶೀ ಮಂತ್ರಕ್ಕೂ ಲೋಪಾಮುದ್ರೆ ಎಂಬ ಹೆಸರಿದೆ.

ತೀರ್ಥೋದ್ಭವ: ತುಲಾಸಂಕ್ರಮಣ ಅಂದರೆ ಸೂರ್ಯನು ತುಲಾರಾಶಿಯನ್ನು ಪ್ರವೇಶಿಸುವ ಪುಣ್ಯದಿನ. ಸಾಮಾನ್ಯವಾಗಿ

ಮುಂದಿನ ಪುಟಕ್ಕೆ.

18ನೇ ಪುಟದಿಂದ

ಹಾಕಿದಂಗಾತ್. ಇದ್ದ ಒಂದು ಪ್ಯಾಕೆಟ್‌ನು ಬಿದ್ದ್‌ಹೊತ್. ಮನೇಲಿ ಕಳ್ಳ್‌ನ ಬಾಯಿಗೆ ತಿಂಬಕೆತ ತಂದ ಮೊಟ್ಟೆನು ಬಿದ್ದ್ ಆಮ್ಲೆಟ್ ಆತ್. ಬ್ಯಾರೆ ಸಾಮಾನ್ ಬಿದ್ದ್ ಚೆಲ್ಲಾಡ್ದ್ ಸಣಪಂಗೆ ಬ್ಯಾಜರ ಆತ್ಲೆ. ಇದ್ದ ಒಂದೇ ಒಂದು ಪ್ಯಾಕೆಟ್ ಬಿದ್ದ್ ಹೋದ್ ಸಣಪಂಗೆ ಬಾರಿ ಬ್ಯಾಜರಾತ್. ಸ್ವಲ್ಪ ಕತ್ತಲೆನು ಆವುಟು ನಾನ್ಯಾಕೊ ಅಂಗಡಿಂದ ಬರ್‍ತಾ ಒಳೆ, ಸಣಪ ಗದ್ದೆಲಿ ಮೊರಟೆ ಮೀನ್ ಒದ್ದಾಡ್ದಂಗೆ ಒದ್ದಾಡಿಕಂಡ್ ಬಿದ್ದ ಒಂದು ಪ್ಯಾಕೆಟ್‌ನ ಹುಡ್ಕಿದೆ. ಗಂಬೂಟು ಬ್ಯಾರೆ ಹಾಕಿದರ್‌ಂದ ಕೆಸರ್‌ಲಿ ಕಾಲ್ ತೆಗಿಯಕೆ ಆದ್ಯಾ.... ಗದ್ದೆ ನೋಡ್‌ರೆ...ಒಳ್ಳ ಕೋಣ ಪಳ್ಳ ಬಿದ್ದಂಗೆ ಆಗುಟು. ಸಣಪ ಇರ್‍ದು ಬ್ಯಾರೆ ಸಣ್ಣಮರಿ ಕೋಣನಂಗೆ...! ಆ ನಾಟಿ ಕರಿಹತ್ತಿದ ಗದ್ದೆಲಿ ನುಲಿಗ ತೀರಾ ತಲೆಕೆಳ್ಗೆ ಆಗಿ ಹುಗ್ದು ಹೋಗುಟು. ಇನ್ ಅದರ ಚಿಗ್‌ರ್‌ಲೆ ಕದಿರು ಹೊರಡಕೇನೊ...?. ಏನಾತ್ ಸಣಪತ ನಾನ್ ಕೇಳ್ಕನ ಜೋಬುಲಿದ್ದ 100 ರೂಪಾಯಿನ ನೋಟು ಬಿದ್ದೋತ್ ಅದರ್‌ನ ಹುಡ್ಕುದುತ ಹಸಿ ಸುಳ್ಳು ಹೇಳ್ತ್.

ಬಿದ್ದ್ ಹೋದ ಸಾಮಾನ್‌ನೆಲ್ಲ ಹೆರ್‍ಕಿಕಂಡ್ ಆದದ್ ಆತ್ ಪೋಯಿ ಮನೆಗೆ ತೇಳ್ರ ಸಣಪಂಗೆ ಪ್ಯಾಕೆಟ್ ಸಿಕ್ಕದೆ ಬಾಕೆ ಮನಸ್ಸ್ ಇಲ್ಲೆ. ಹೆಂಗೆಲ್ಲೊ ಸಮದಾನ ಮಾಡಿ ಕರ್‍ಕಂಡ್ ದಾರಿಲಿ ಬಾಕನ ಸಣಪ ಗದ್ದೆಯಜಮಾನಂಗೆ ಅವ ಅಂತವ - ಇಂತವ ಅವನ ಹಂಗೆ ಮಾಡಕು ಹಿಂಗೆ ಮಾಡಕುತ ತಾರಾಮಾರ ಬೈಕಂಡ್ ಮನೆಗೆ ಬಾಕನ ಸಣವಂದ್ ರಂಪಾಟ ಸುರಾತಲಾ.... ಇಷ್ಟೊತ್ತೀಗೆ ಬಾದ, ಹೊತಾರೆ ಹೋದವ್ರ ಸೂರ್ಯ ಕಂತಿದ ಮೇಲೆ ಬಂದರೇಲಾತ ಸಣಪಂಗೆ ಬೈತ್. ನೀನ್ ಸ್ವಲ್ಪ ಬಾಯಿ ಮುಚ್ಚುನೆ ರಾಜ್‌ಕುಮಾರನ ವೀರಪ್ಪನ್ ತೇಳ್ವ ಕಳ್ಳ ಅಪಹರಿಸಿ ಕಂಡ್ ಹೋತ್‌ಗಡ. ಅದಿಕ್ಕೆ ಇಂದ್ ಮಡಿಕೇರಿಲಿ ಬಸ್ಸ್‌ನವು ಎಲ್ಲ ಸ್ಟ್ರೈಕ್ ಮಾಡ್ದೊ. ಬಸ್ಸ್‌ಗ ಹೊರ್‍ಡದೆ ಸಾಯಂಕಾಲ, ಅದ್ಕ ಇಷ್ಟ್ ಲೇಟಾತ್‌ತ ಹೇಳ್ಯಾಕನ ಹತ್ತಿಕಂಡತಲ ಇಬ್ಬರಿಗೆ ಜಗಳ. ಸಣವ ಇನ್ನ್ ಹೊಡ್ದತ, ಬಡ್ಡತ ನಾ ನೋಡಿಕೆ ಹೋತುಲೆ. ನಮಿಗ್ಯಾಕೆ ಬೇಕು ಬೇರೆಯವರ ವಿಷಯತ ಗ್ಯಾನ ಮಾಡಿಕಂಡ್ ಸೀದಾ ಮನೆ ಕಡೆಗೆ ನಡ್ದೆ...!.

**ಕಾನಡ್ಕ ಹನೀಶ್ ಅಪ್ಪಾಜಿ, ಮರಗೋಡು.**

---

## ನಿಧನ

**ಚೌಟಾಜೆ ಎಸ್. ರಾಮಣ್ಣ (ಚೆಂಬು)** ಇವರು ದಿನಾಂಕ 13-6-2000ದ ಮಂಗಳವಾರ ಬೆಳಿಗ್ಗೆ ಪುತ್ತೂರಿನ ಚೇತನ ಆಸ್ಪತ್ರೆಯಲ್ಲಿ ನಿಧನರಾದರು. ಬಿ.ಪಿ. ಇದ್ದ ಇವರಿಗೆ ದಿಢೀರ್ ತಲೆಬೇನೆ ಉಂಟಾಗಿ ಚಿಕಿತ್ಸೆಗಾಗಿ ಆಸ್ಪತ್ರೆಗೆ ಸೇರಿಸಲಾಗಿತ್ತು. ಮೃತರಿಗೆ 65 ವರ್ಷ ವಯಸ್ಸಾಗಿತು. ಪತ್ನಿ, ಜನ 4 ಗಂಡು ಮಕ್ಕಳು, 4 ಜನ ಹೆಣ್ಣು ಮಕ್ಕಳು, ಸೊಸೆಯರು, ಅಳಿಯಂದಿರು, ಮೊಮ್ಮಕ್ಕಳು ಹಾಗೂ ಅಪಾರ ಬಂಧು ಬಳಗ ಮತ್ತು ಸ್ನೇಹಿತ ಅಭಿಮಾನಿಗಳನ್ನು ಅಗಲಿದ್ದಾರೆ. ಅಡಿಕೆ ಬೆಳೆಗಾರರಾದ ಇವರು ವ್ಯವಸಾಯ ಸೇವೆ ಸಹಕಾರಿ ಸಂಘದ ಸಹಕಾರಿಗಳಾಗಿ ಹೆಸರಾಗಿದ್ದರು.

**ಜಯರಾಂ ಮಾಸ್ಟರ್, ಆನೆಹಳ್ಳ, ಚೆಂಬುಗ್ರಾಮ**

8ನೇ ಪುಟದಿಂದ

ಪ್ರಸನ್ನ ಒಳಗೆ ಇದ್ದಾರ?"

ಪೀಸಿ "ಇಲ್ಲ, ಈಗ ತಾನೇ ಹೊರಗೆ ಹೋದರು"

ಗಾಬರಿಯಿಂದ "ಎಲ್ಲಿಗೆ ಹೋದರು?" "ರೇವತಿ ಅನ್ನೋವ್ರು ಹುತ್ತದ ಹತ್ತಿರ ಪ್ರಜ್ಞೆ ತಪ್ಪಿ ಬಿದ್ದಿದ್ದಾರೆ ಅಂತ ಪೋನ್ ಬಂದಿತ್ತು."

ರೇವತಿ, ಆತುರದಿಂದ "ಅಂದರೆ ಪ್ರಸನ್ನ ಹುತ್ತದ ಕಡೆ ಹೋದರೆ"?

ಹೌದು"

"ಪ್ರೋಟೆಕ್ಷನ್‌ಗೆ ಯಾರು ಹೋದರು?"

"ಯಾರೂ ಹೋಗಿಲ್ಲ, ಅವರೇ ಬೇಡಾ ಅಂತ ಅಂದರು ಎಂದು ಉದಾಸೀನವಾಗಿ ಹೇಳಿದರು.

ತಡ ಮಾಡಲಿಲ್ಲ, ರೇವತಿ ಶ್ರೀಕಂಠನ ಕೈ ಹಿಡಿದುಕೊಂಡು ಹುತ್ತದ ಕಡೆ ಓಡಿದರು !

ರೇವತಿಗೆ ನಂಬಿಕೆ ಇರಲಿಲ್ಲ !

ಅನಾಹುತ ನಡೆದಿರುತ್ತದೆ ! ಪ್ರಸನ್ನ ಈಗ ಸರ್ಪಗಳಿಗೆ ಬಲಿಯಾಗಿರುತ್ತಾನೆ !

(ಮುಂದುವರೆಯುತ್ತದೆ)

---

ಹಿಂದಿನ ಪುಟದಿಂದ

ಅಕ್ಟೋಬರ್ ತಿಂಗಳ 17ನೇ ತಾರೀಕಿನಂದು ನಡೆಯುತ್ತದೆ. ಆದಿನ ಗಂಗೆಯು ಕಾವೇರಿಯೊಡನೆ ಸೇರುವಳು ಎಂದು ಪ್ರತೀತಿ ಇದೆ. ಎಲ್ಲರೂ ಅದನ್ನೇ ನಂಬಿ ನಡೆಯುವರು. ಈ ಶ್ಲೋಕವನ್ನು ಗಮನಿಸಿ "ಜಾಹ್ನವೀ ಸರಿತಾಂ ಶ್ರೇಷ್ಠಾ ತುಲಾಯಾಂ ಸಂಕ್ರಮೇ ರವೌ| ಸಾನ್ನಿಧ್ಯಂ ಕುರುತೇ ತತ್ರ ಸರ್ವ ತೀರ್ಥ ಗಣೈಃಸಹ ||" ಎಂದು ಸ್ಕಾಂದ ಪುರಾಣದಲ್ಲಿ ಹೇಳಿದೆ. ಇದರ ಅರ್ಥ ತುಲಾ ಸಂಕ್ರಮಣ ಮೂಹೂರ್ತದಲ್ಲಿ ಗಂಗೆ (ಜಾಹ್ನವೀ, ಭಾಗೀರಥಿ)ಯ ಸಾನ್ನಿಧ್ಯವು ಇನ್ನಿತರ ಪುಣ್ಯ ತೀರ್ಥ(ನದಿ) ಗಳೊಂದಿಗೆ ಕಾವೇರಿ ತೀರ್ಥದಲ್ಲಾಗುತ್ತದೆಯೇ ಹೊರತು, ಗಂಗಾನದಿಯೇ ಕಾವೇರಿಗೆ ಹರಿದು ಬರುವುದಿಲ್ಲ. ಚಿತ್ಸ್ವರೂಪಿಣಿಯಾದ ಗಂಗಾಭಿಮಾನಿ ದೇವತೆಯ ಸಾನ್ನಿಧ್ಯವು ಆಗ ಕಾವೇರಿ ತೀರ್ಥದಲ್ಲಾದಂತೆ, ಕಾವೇರಿಯ ದಂಡೆಯಲ್ಲಿರುವ ತಲಕಾಡಿನ ಗೋಕರ್ಣ ತೀರ್ಥ ಹಾಗೂ ಭಾರತದ ಇನ್ನಿತರ ನದಿಗಳಲ್ಲೂ ಅದೇ ತುಲಾ ಸಂಕ್ರಮಣ ದಂದು ಸಂಭವಿಸುತ್ತದೆ. ಎಂಬುದು ಸ್ಕಾಂದ ಪುರಾಣದಲ್ಲಿ ಸ್ಪಷ್ಟವಿದೆ.

**ಬಿಟ್ಟೀರ ಚೋಂದಮ್ಮ ಶಂಭು.**

---

## ಕವಿತೆ

ಮಾವಿನ ಮರದಲಿ ಹಾಡುವ ಕೋಗಿಲೆ
ಜೊತೆಯಲಿ ಆಡಲು ಬಾರಲೆ ಈಗಲೆ
ನಿನ್ನಯ ಹೊಳೆಯುವ ಕಂಗಳು ಕೆಂಪು
ನಿನ್ನಯ ಗಾನವು ಕಿವಿಗಳಿಗಿಂಪು

ಕೆ. ಎ. ಶಿವಪ್ಪ, ಗಾಳಿಬೀಡು

---



ದಿನಾಂಕ 10-9-2000ರ್ಲ್ಲಿ ಬೆಂಗಳೂರಿನ ಕಾವೇರಿ ನಾಡಿನಲ್ಲಿ ಶ್ರೀ ಅಮ್ಮಾಜೀರ ಪೊನ್ನಪ್ಪನವರ ನಾಲ್ಕನೇ ಧ್ವನಿ ಸುರುಳಿ 'ಕಾವೇರಿನಾಡ ಐಸಿರಿ' ಬಿಡುಗಡೆ ಗೊಳ್ಳುತ್ತಿರುವುದು. ಚಿತ್ರದಲ್ಲಿ ಎಡದಿಂದ ಬಲಕ್ಕೆ : ಶ್ರೀಮತಿ ಅಮ್ಮಾಜೀರ ನೀಲಮ್ಮ ಪೊನ್ನಪ್ಪನವರು, ಅಮೆ ಸೀತಾರಾಮ್‌ನವರು, ಕೇಟೋಳಿ ಯತೀಸ್‌ನವರು, ಶ್ರೀ ಅಮ್ಮಾಜೀರ ಪೊನ್ನಪ್ಪನವರು, ತುಂತಜೆ ಗಣೇಶ್‌ನವರು, ಶ್ರೀಮತಿ ಚೆಯುಂಡಿರ ರಾಧ ಯಾದವ್‌ನವರು ಹಾಗೂ ಪಟ್ಟಡ ಪ್ರಭಾಕರ್‌ನವರುಗಳು.




ಅಕಾಡೆಮಿಯ ಸ್ಥಾಪಕ ಅಧ್ಯಕ್ಷರ ಜೊತೆ ಮುಖ್ಯ ಅತಿಥಿಗಳ ಸಂಭಾಷಣೆ : ಚೆಯುಂಡಿರ ರಾಧನವರು, ಕೆಟೋಳಿ ಯತೀಶ್‌ನವರು, ತುಂತಜೆ ಗಣೇಶ್‌ನವರು ದಂಬೆಕೋಡಿ ಆನಂದನವರು.



ಪ್ರೇಕ್ಷಕರ ಸಾಲಿನಲ್ಲಿ ಅತಿಥಿಗಳು ತುಂತಜೆ ಗಣೇಶ್, ಕೆಟೋಳಿ ಯತೀಸ್, ಅಣ್ಣೇಚ್ಚೀರ ಮಾದಪ್ಪ, ಕೋಡಿ ಚಂದ್ರಶೇಖರ್, ಬೈತಡ್ಕ ಅರುಣ್‌ಕುಮಾರ್ ಹಾಗೂ ತಡಿಯಪ್ಪನ ಕುಮಾರ ಜಯನವರುಗಳು.



ಕಾವೇರಿನಾಡಿಗೆ ದಿನಾಂಕ 10-9-2000ರ್ಲ್ಲಿ ಜನಸಮೂಹ ಬಂದಿಳಿದ ವಾಹನಗಳ ನಿಲುಗಡೆ.

KA/SK/MYS-88 10-01-96 TCI Kar. 09592

# ಮೈಸೂರಿನ ಕಲಾಮಂದಿರದಲ್ಲಿ ಆದರ್ಶ ದಂಪತಿ, ಫ್ಯಾಷನ್ ಶೋ ಕಾರ್ಯಕ್ರಮ

## ಕೊಡಗು ಗೌಡ ಮಾಜಿ ಸೈನಿಕರ ಕ್ಷೇಮಾಭಿವೃದ್ಧಿ ಸಂಘ (ರಿ), ಮೈಸೂರು

ಈ ಮೇಲ್ಕಂಡ ಸಂಘದ ವತಿಯಿಂದ ದಿನಾಂಕ 3-12-2000ದ ಆದಿತ್ಯವಾರದಂದು ಮೈಸೂರಿನ ಕಲಾಮಂದಿರದಲ್ಲಿ ಬೆಳಿಗ್ಗೆ 9 ಗಂಟೆಯಿಂದ ಸಂಜೆ 5 ಗಂಟೆಯವರೆಗೆ ಸಾಂಸ್ಕೃತಿಕ ಆದರ್ಶ ದಂಪತಿಗಳು ಮತ್ತು ಫ್ಯಾಶನ್ ಶೋ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ. ಈ ಸ್ಪರ್ಧೆಯಲ್ಲಿ ಭಾಗವಹಿಸಲು ಇಚ್ಛಿಸುವವರು ದಿನಾಂಕ 25-11-2000ದ ಶನಿವಾರ ಸಂಜೆ 5 ಗಂಟೆಯೊಳಗೆ ವ್ಯವಸ್ಥಾಪಕರು, ಕೊಡಗು ಗೌಡ ವಿದ್ಯಾರ್ಥಿ ನಿಲಯ, ಜಯಲಕ್ಷ್ಮಿಪುರಂ, ಮೈಸೂರು ಇವರನ್ನು ಸಂಪರ್ಕಿಸುವುದು. ಅಲ್ಲದೆ, ಭಾಗವಹಿಸುವವರು ಖಡ್ಡಾಯವಾಗಿ ಗೌಡ ಸಂಸ್ಕೃತಿಯ ಹಳೇ ಸಂಪ್ರದಾಯದ ಉಡುಪಾದ ಬಿಳಿ ಕುಪ್ಪಸ ದಟ್ಟಿ, ರುಮಾಲು, ಗೇಂಟಿ ಸೀರೆಯಲ್ಲಿಯೂ, ಬಿಳಿಕೋಟು, ಪಂಚೆ, ಶಾಲು, ರುಮಾಲು, ಸೆರಗು ಸೀರೆಯಲ್ಲಿಯೂ ಭಾಗವಹಿಸುವುದು. ಮೊದಲ ಬಹುಮಾನ ಗಳಿಸಿದವರಿಗೆ ಗೌಡ ಕಿಶೋರ, ಗೌಡ ಕಿಶೋರಿಯೆಂಬ ಬಿರುದನ್ನು ಸಹ ನೀಡಲಾಗುವುದು.

**ಜನತೆ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ ಜಯಪ್ರದಗೊಳಿಸುವಂತೆ ಸವಿನಯ ಪ್ರಾರ್ಥನೆ.**

**ಈ ಸ್ಪರ್ಧೆಗೆ ಭಾಗವಹಿಸಲು ನೋಂದಣಿ ಶುಲ್ಕ ಹೀಗಿದೆ.** (M.O/DD ಅಥವಾ ಸ್ಥಳೀಯ ಚೆಕ್‌ಗಳನ್ನು ಸ್ವೀಕರಿಸಲಾಗುವುದು.)

| | | |
|---|---|---|
| ಅ) ಆದರ್ಶ ದಂಪತಿಗಳು | ರೂ. | 150/- |
| ಇ) ಫ್ಯಾಶನ್ ಶೋ (ಯುವಕ, ಯುವತಿಯರಿಗೆ) | ರೂ. | 100/- |

***ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ :***

1) ತಡಿಯಪ್ಪನ ಕುಮಾರಜಯ, ಅಧ್ಯಕ್ಷರು ✆ : 568574
2) ಕುಯ್ಯಮುಡಿ ರಾಮಪ್ಪ, ಉಪಾಧ್ಯಕ್ಷರು ✆ : 517658
3) ಕರ್ಣಯನ ಲಕ್ಷ್ಮಣ, ಕಾರ್ಯದರ್ಶಿ ✆ : 489052
4) ಕೊಂಬಾರನ ಸುಬ್ಬಯ್ಯ, ನಿರ್ದೇಶಕರು ✆ : 302650

**ಅಧ್ಯಕ್ಷರು ಮತ್ತು ಕಾರ್ಯಕಾರಿ ಮಂಡಳಿ.**

# ಕಾವೇರಿ ನಾಡ ಐಸಿರಿ ಕ್ಯಾಸೆಟ್ ದೊರೆಯುತ್ತದೆ




ತಯಾರಕರು, ವಿತರಕರು :
ಅಮ್ಮಾಜೀರ ಎಸ್. ಪೊನ್ನಪ್ಪ ನೀಲಾ,
ನೆಲಮಂಗಲ ಬೆಂಗಳೂರು.

***ಕೊಡಗಿನಲ್ಲಿ ಕ್ಯಾಸೆಟ್ ದೊರೆಯುವ ಸ್ಥಳ :***

ಮಡಿಕೇರಿ, ಮೂರ್ನಾಡ್, ವೀರಾಜಪೇಟೆ, ಸಿದ್ದಾಪುರ, ಸುಂಟಿಕೊಪ್ಪ, ಕುಶಾಲನಗರ. ಇಲ್ಲಿನ ಎಲ್ಲಾ ಕ್ಯಾಸೆಟ್ ಅಂಗಡಿಯಲ್ಲಿ ಧ್ವನಿ ಸುರುಳಿಗಳು ದೊರೆಯುತ್ತದೆ.

| | |
|---|---|
| 1) ಕಾವೇರಿನಾಡ್ ಐಸಿರಿ | ರಾಜ್ ಶ್ರೀನಾಥ್, ಅರ್ಚನ ಉಡುಪ |
| 2) ಜೋಗಿ ಬಂದಾನಲ್ಲಾ ಜೋಗಿ | ಬದ್ರಿಪ್ರಸಾದ್, ಕೋರಸ್ |
| 3) ಹೆಣ್ಣು ವಹಿಸಿಕೊಡುವ ಸೋಬಾನೆ | ಮಂಗಳ, ಸುನಿತ |
| 4) ದಿಬ್ಬಣ ಬರುವಾಗ ಸೊಬಾನೆ | ಮಂಗಳ, ಸುನಿತ |
| 5) ಜಂ ಕಾವೇರಿ ಶೃತಿ | ರಾಜ್ ಶ್ರೀನಾಥ್, ಅರ್ಚನಾ ಉಡುಪ |
| 6) ಕಾವೇರಿನಾಡ ಬಾವುಟ | ಬದ್ರಿಪ್ರಸಾದ್, ಕೋರಸ್ |
| 7) ಜೋರಾಗಿ ಮಳೆ ಬಾತ್ | ಬದ್ರಿಪ್ರಸಾದ್, ಸುನಂದ |

ಸಾಹಿತ್ಯ : ಅಮ್ಮಾಜೀರ ಎಸ್. ಪೊನ್ನಪ್ಪ ನೀಲಾ
ಬಿಟ್ರ ಶಂಭು ಚೋಂದಮ್ಮ

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.